# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ ನವೆಂಬರ್ ೧೭, ೨೦೧೬ (ಕಾರ್ತಿಕ ೨೬, ಶಕ ವರ್ಷ ೧೯೩೮)<br>Bengaluru, Thursday, November 17, 2016 ( Karthika 26, Shaka Varsha 1938) | ಸಂಚಿಕೆ ೪೫<br>Issue 45 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ

**ವಿಷಯ :** ಶ್ರೀ ವೈ.ಎನ್. ರವಿಶಂಕರ್, ಭೂಮಾಪಕರು. ತಹಶೀಲ್ದಾರ್ ಕಛೇರಿ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ವಿರುದ್ಧದ ಟ್ರ್ಯಾಪ್ ಪ್ರಕರಣ ಕುರಿತು.

**ಉಲ್ಲೇಖ :**

1. ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–/ ಸಿಆರ್ 05/2011, ಚಿಕ್ಕಮಗಳೂರು ದಿನಾಂಕ: 21–04–2011.
2. ಈ ಕಛೇರಿ ಸಮ ಸಂಖ್ಯೆ ನಡವಳಿ ದಿನಾಂಕ 18–06–2011.
3. ಈ ಕಛೇರಿಯ ಸಮ ಸಂಖ್ಯೆ ನಡವಳಿ ದಿನಾಂಕ: 24–02–2012.
4. ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–18/ಸಿಆರ್.5/2011, ಚಿಕ್ಕಮಗಳೂರು ದಿನಾಂಕ 07–03–2012.
5. ಈ ಕಛೇರಿಯ ಸಮ ಸಂಖ್ಯೆ ನಡವಳಿ ದಿನಾಂಕ: 19–04–2012.
6. ಘನ ಚಿಕ್ಕಮಗಳೂರು ಜಿಲ್ಲಾ ಪ್ರಧಾನ ಸತ್ರ ಮತ್ತು ವಿಶೇಷ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ:38/2012ರ ತೀರ್ಪು ದಿನಾಂಕ 04–09–2014.
7. ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–18/ಸಿಆರ್5/2011, ಚಿಕ್ಕಮಗಳೂರು. ದಿನಾಂಕ 02–12–2014.
8. ನೌಕರರ ಮನವಿ ದಿನಾಂಕ: 06–11–2014.

**ಪ್ರಸ್ತಾವನೆ :**

ಶ್ರೀ ವೈ.ಎನ್. ರವಿಶಂಕರ್, ಭೂಮಾಪಕರು, ತಹಶೀಲ್ದಾರ್ ಕಛೇರಿ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಹಿಂದೆ ತಹಶೀಲ್ದಾರ್, ಚಿಕ್ಕಮಗಳೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಫಿರ್ಯಾದಿದಾರರಾದ ಶ್ರೀ ಬಿ. ಬಿ. ಲೋಕೇಶಗೌಡ, ಕಡವಂತಿ ಗ್ರಾಮ ಚಿಕ್ಕಮಗಳೂರು ತಾಲ್ಲೂಕು ಇವರು ಕಡವಂತಿ ಗ್ರಾಮ ಸ.ನಂ. 197/2 ರಲ್ಲಿ 9 ಗುಂಟೆ 198 ರಲ್ಲಿ 10 ಗುಂಟೆ 203ರಲ್ಲಿ 2 ಎಕರೆ 4 ಗುಂಟೆ ಜಮೀನನ್ನು ಸರ್ವೆ ಮಾಡಿ ನಕಾಶೆ ತಯಾರಿಸಿ ಪಕ್ಕಾ ಪೋಡು ಮಾಡಿ ಕೊಡಲು ತಹಶೀಲ್ದಾರ್ ಕಛೇರಿಗೆ ಅರ್ಜಿ ಸಲ್ಲಿಸಿದ್ದು, ಸದರಿ ಜಮೀನಿನ ಅಳತೆಯನ್ನು ಆಪಾದಿತ ನೌಕರರು ಮಾಡಿದ್ದು, ನಕಾಶೆಯನ್ನು ತಯಾರಿಸಿ ತಹಶೀಲ್ದಾರ್ ರವರಿಗೆ ಕಳುಹಿಸಲು ₹.10,000/–ಗಳ ಅಕ್ರಮ ಸಂಭಾವನೆ ₹.10,000/– ಹಣಕ್ಕೆ ಒತ್ತಾಯಿಸಿ ₹.500/–ಗಳನ್ನು ಪಡೆದುಕೊಂಡಿರುತ್ತಾರೆ. ಫಿರ್ಯಾದಿದಾರರಿಗೆ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ ಕಾರಣ ಚಿಕ್ಕಮಗಳೂರು ಲೋಕಾಯುಕ್ತ ಪೋಲೀಸ ಠಾಣೆಗೆ ದಿನಾಂಕ 29–03–2011ರಂದು ದೂರು ನೀಡಿರುತ್ತಾರೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿರುತ್ತಾರೆ.

ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರುರವರು ಉಲ್ಲೇಖ(1)ರ ಪತ್ರದಲ್ಲಿ ಆಪಾದಿತ ನೌಕರರು ಫಿರ್ಯಾದಿದಾರರಿಂದ ಚಿಕ್ಕಮಗಳೂರು ಕಂದಾಯ ಇಲಾಖೆಯ ಸರ್ವೆ ಶಾಖೆಯಲ್ಲಿ ಲಂಚದ ಹಣ ₹.10,000/–ಗಳನ್ನು ಕೇಳಿ ಪಡೆದುಕೊಂಡಾಗ, ಚಿಕ್ಕಮಗಳೂರು ಲೋಕಾಯುಕ್ತರವರು ಬೀಸಿದ ಟ್ರ್ಯಾಪ್ ಬಲೆಯಲ್ಲಿ ಸಿಕ್ಕಿಬಿದ್ದಿರುತ್ತಾರೆಂದೂ, ಲಂಚದ ಹಣವನ್ನು ಪಂಚರ ಸಮಕ್ಷಮ

ವಶಪಡಿಸಿಕೊಳ್ಳಲಾಯಿತು ಎಂದು ತಿಳಿಸುತ್ತಾ, ಆರೋಪಿತ ನೌಕರರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಕೂಡಲೇ ಅಮಾನತ್ತಿನಲ್ಲಿರಿಸಿ ಹುದ್ದೆಯ ಹಕ್ಕನ್ನು ಬೇರೆಡೆಗೆ ವರ್ಗಾಯಿಸಲು ಕೋರಿರುತ್ತಾರೆ.

ಈ ಕಛೇರಿಯ ಉಲ್ಲೇಖ (2)ರ ನಡವಳಿಯಲ್ಲಿ ಆಪಾದಿತರನ್ನು ಟ್ರ್ಯಾಪ್ ಪ್ರಕರಣದ ವಿಚಾರಣೆಯನ್ನು ಕಾಯ್ದಿರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತುಗೊಳಿಸಿ ಹುದ್ದೆಯ ಹಕ್ಕನ್ನು ತಹಶೀಲ್ದಾರ್ ಗದಗ್ ಕಛೇರಿಗೆ ಸ್ಥಳಾಂತರಿಸಲಾಗಿತ್ತು.

ಈ ಕಛೇರಿಯ ಉಲ್ಲೇಖ (3)ರ ನಡವಳಿಯಲ್ಲಿ ಆಪಾದಿತರನ್ನು ಅಮಾನತ್ತಿನಿಂದ ತೆರವುಗೊಳಿಸಿ ತಹಶೀಲ್ದಾರ್ ಗದಗ್ ಕಛೇರಿಯಲ್ಲಿ ಖಾಲಿ ಇದ್ದ ಭೂಮಾಪಕರ ಹುದ್ದೆಗೆ ಪುನರ್ ನೇಮಕಗೊಳಿಸಲಾಗಿರುತ್ತದೆ.

ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಉಲ್ಲೇಖ (4)ರ ಪತ್ರದಲ್ಲಿ ಆಪಾದಿತರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ7, 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ಕೋರಿರುತ್ತಾರೆ. ಈ ಕಛೇರಿಯ ಉಲ್ಲೇಖ (5)ರ ನಡವಳಿಯಲ್ಲಿ ಆರೋಪಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅಭಿಯೋಗ ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಚಿಕ್ಕಮಗಳೂರಿನ ಘನ ಪ್ರಧಾನ ಸತ್ರ ಮತ್ತು ವಿಶೇಷ ನ್ಯಾಯಲಯದ ಉಲ್ಲೇಖ (6)ರ ಆದೇಶದಲ್ಲಿ ಶ್ರೀ ವೈ.ಎನ್ ರವಿಶಂಕರ್, ಭೂಮಾಪಕರು ತಾಲ್ಲೂಕು ಕಛೇರಿ ಚಿಕ್ಕಮಗಳೂರು ಇವರು ತಪ್ಪಿತಸ್ಥರೆಂದು ಪರಿಗಣಿಸಿ, ಆರೋಪಗಳು ಸಾಬೀತಾಗಿದ್ದಕ್ಕೆ 3 ವರ್ಷ ಕಠಿಣ ಸಜೆ ಮತ್ತು ₹. 10,000/–ಗಳ ದಂಡ ಕಟ್ಟಲು ತೀರ್ಪು ನೀಡಲಾಗಿರುವ ಹಿನ್ನೆಲೆಯಲ್ಲಿ, ಭಾರತೀಯ ಸಂವಿಧಾನದ ಅನುಚ್ಛೇದ 311 (2)ರ ಪ್ರವರ್ಗ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು. 1957ರ ನಿಯಮ 14 ಹಾಗೂ 10(2) ಮತ್ತು ಸರ್ಕಾರದ ಸುತ್ತೋಲೆ ಸಂ. ಸಿಆಸುಇ 9 ಸೇಇವಿ 95, ದಿ:26–06–1996, ಸರ್ವೋಚ್ಛ ನ್ಯಾಯಾಲಯದ ಕ್ರಿಮಿನಲ್ ಮೇಲ್ಮನವಿ ಸಂ. 770/2001ರ ತೀರ್ಪಿನತ್ತ ಗಮನವನ್ನು ಸೆಳೆಯುತ್ತಾ ಆರೋಪಿತ ನೌಕರರನ್ನು ಕೂಡಲೇ ಸೇವೆಯಿಂದ ವಜಾಗೊಳಿಸಲು ಅಗತ್ಯ ಕ್ರಮ ಜರುಗಿಸುವಂತೆ ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಉಲ್ಲೇಖ (7)ರ ಪತ್ರದಲ್ಲಿ ಕೋರಿರುತ್ತಾರೆ.

ಶ್ರೀ ವೈ.ಎನ್ ರವಿಶಂಕರ್, ಭೂಮಾಪಕರು ಉಲ್ಲೇಖ(8)ರ ಮನವಿಯೊಡನೆ ಸಲ್ಲಿಸಿರುವ ಗೌ.ಕರ್ನಾಟಕ ಉಚ್ಚ ನ್ಯಾಯಾಲಯದ ದಿ: 26–9–2014ರ I.A. No 1/2014ರ ಆದೇಶದ ಪ್ರತಿಯನ್ನು ಪರಿಶೀಲಿಸಲಾಗಿ, ಚಿಕ್ಕಮಗಳೂರಿನ ಘನ ಪ್ರಧಾನ ಸತ್ರ ಮತ್ತು ವಿಶೇಷ ನ್ಯಾಯಾಲಯದ ತೀರ್ಪಿನ ವಿರುದ್ಧ ಆರೋಪಿತರು ಗೌ. ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂ: 817/2014ರಂತೆ ಮೇಲ್ಮನವಿಯನ್ನು ಸಲ್ಲಿಸಿದ್ದು, ಘನ ನ್ಯಾಯಾಲಯವು ಮೇಲ್ಮನವಿಯನ್ನು ಅಂಗೀಕರಿಸುತ್ತಾ, ಘನ ಸತ್ರ ನ್ಯಾಯಾಲಯವು ವಿಧಿಸಿರುವ ಶಿಕ್ಷೆಯನ್ನು ಮಾತ್ರ I.A. No.1/2014ರಲ್ಲಿ ಅಮಾನತ್ತುಗೊಳಿಸಿದ್ದು ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇವಿ 95 ದಿನಾಂಕ 26–06–1996 ರಲ್ಲಿ ಮತ್ತು ಸರ್ವೋಚ್ಛ ನ್ಯಾಯಾಲಯದ ಪ್ರಕರಣ ಸಂಖ್ಯೆ: 770/2001, ದಿನಾಂಕ 02–08–2001 ರನ್ವಯ ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ ತೀರ್ಪು ನೀಡಿದ್ದಲ್ಲಿ ಸಂವಿಧಾನದ ಅನುಚ್ಛೇದ 311 (2) ರಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14(1) ರನ್ವಯ ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ತೆಗೆದು ಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಹಾಗೂ ನ್ಯಾಯಾಲಯದಲ್ಲಿ ಕ್ರಿಮಿನಲ್ ಪ್ರಕರಣದಲ್ಲಿ ದೋಷಸಿದ್ಧಿಯಾದಾಗ ಯಾವುದೇ ಸರ್ಕಾರಿ ನೌಕರನು ಸಾರ್ವಜನಿಕವಾಗಿ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅರ್ಹನಿರುವುದಿಲ್ಲವೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ ಸದರಿ ನೌಕರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ, ಶಿಸ್ತು/ಟ್ರ್ಯಾಪ್ (ಮೈ) 03/2011–12 ದಿನಾಂಕ: 22–07–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಮುನೀಶ್ ಮೌದ್ಗಿಲ್ ಭಾ.ಆ.ಸೇ. ಆಯಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು, ಘನ ಚಿಕ್ಕಮಗಳೂರು ಜಿಲ್ಲಾ ಪ್ರಧಾನ ಸತ್ರ ಮತ್ತು ವಿಶೇಷ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 38/2012ರ ತೀರ್ಪು ಹಾಗೂ ಸರ್ಕಾರದ ಸುತ್ತೋಲೆ ಸಂ:ಸಿಆಸುಇ 9 ಸೇಇವಿ 95, ದಿನಾಂಕ 26–06–1996 ರನ್ವಯ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 9(3)ರೊಂದಿಗೆ ಓದಿಕೊಂಡ ನಿಯಮ 8(VIII) ರಲ್ಲಿ ಪ್ರದತ್ತವಾದ ಅಧಿಕಾರದಂತೆ ಶ್ರೀ ವೈ.ಎನ್. ರವಿಶಂಕರ್ ಭೂಮಾಪಕರು, ತಹಶೀಲ್ದಾರ್ ಕಛೇರಿ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

**PR-651**

**ಆಯುಕ್ತರು**
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಕರಿಗೌಡ, ಗ್ರೂಫ್ 'ಡಿ' ನೌಕರರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಚನ್ನಪಟ್ಟಣ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ:**

1. ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಜಕೃನಿ/ರಾನ/ಕ.ಗೌ/ಆಗೈಹಾ/2013–14 ದಿನಾಂಕ: 28–9–2013.
2. ಸಹಾಯಕ ಕೃಷಿ ನಿರ್ದೇಶಕರು, ಚನ್ನಪಟ್ಟಣ ಇವರ ಪತ್ರ ಸಂಖ್ಯೆ: ಸಕೃನಿ/ಚ/ಸಿ/ಶ್ರೀ ಕ.ದೋ.ಪ/2011–14 ದಿನಾಂಕ:12–7–2013.

3. ಇಲಾಖಾ ಪತ್ರ ಸಂಖ್ಯೆ ಸಿಬ್ಬಂದಿ–1/ ವಿಚಾರಣೆ 5/13/2013–14 ದಿನಾಂಕ: 28–10–2013, 17–12–2013, 7–3–2014.
4. ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಜಕೃನಿ/ರಾನ/ಕ.ಗೌ.ಆಗೈಹಾ/2013–14 ದಿನಾಂಕ: 28–2–2014.
5. ಇಲಾಖಾ ಪತ್ರ ಸಂಖ್ಯೆ ಸಿಬ್ಬಂದಿ–1/ ವಿಚಾರಣೆ 5/13/2013–14 ದಿನಾಂಕ: 24/29–3–2014.
6. ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಜಕೃನಿ/ರಾನ/ಕ.ಗೌ/ಆಗೈಹಾ/2013–14 ದಿನಾಂಕ: 3–7–2014 ಮತ್ತು 8–7–2014.
7. ಇಲಾಖಾ ಪತ್ರ ಸಂಖ್ಯೆ ಸಿಬ್ಬಂದಿ–1/ ವಿಚಾರಣೆ 5/13/2013–14 ದಿನಾಂಕ:21–11–2014 (ದೋಷಾರೋಪಣಾ ಪಟ್ಟಿ ಜಾರಿ)
8. ಸಹಾಯಕ ಕೃಷಿ ನಿರ್ದೇಶಕರು, ಚನ್ನಪಟ್ಟಣ ಇವರ ಪತ್ರ ಸಂಖ್ಯೆ: ಸಕೃನಿ/ಚ/ಸಿ/ಕ.ಡಿ.ನೌ.ಸ್ವೀ/2013–14 ದಿನಾಂಕ: 16–12–2014.
9. ಸಹಾಯಕ ಕೃಷಿ ನಿರ್ದೇಶಕರು, ಚನ್ನಪಟ್ಟಣ ಇವರ ಪತ್ರ ಸಂಖ್ಯೆ: ಸಕೃನಿ/ಚ/ಸಿ/ಕ.ಡಿ.ನೌ.ಸ್ವೀ/2013–14 ದಿನಾಂಕ: 21–1–2015 ರಲ್ಲಿ ನೌಕರರ ರಕ್ಷಣಾ ಹೇಳಿಕೆ
10. ಇಲಾಖಾ ಆದೇಶ ಸಂಖ್ಯೆ ಸಿಬ್ಬಂದಿ–1/ವಿಚಾರಣೆ 5/13/2013–14 ದಿನಾಂಕ: 27–7–2015.
11. ಶ್ರೀ ಡಿ. ವೆಂಕಟೇಶಮೂರ್ತಿ, ಅಧೀಕ್ಷಕರು ಹಾಗೂ ಮಂಡಲನಾಧಿಕಾರಿ, ಜಂಟಿ ಕೃಷಿ ನಿರ್ದೇಶಕರ ಕಛೇರಿ, ರಾಮನಗರ ಇವರ ಮನವಿ ದಿನಾಂಕ: 10–8–2015.
12. ಇಲಾಖಾ ಆದೇಶ ಸಂಖ್ಯೆ ಸಿಬ್ಬಂದಿ–1/ವಿಚಾರಣೆ 5/13/2013–14 ದಿನಾಂಕ: 31–8–2015.
13. ವಿಚಾರಣಾಧಿಕಾರಿಗಳು ಹಾಗೂ ಸಹಾಯಕ ಕೃಷಿ ನಿರ್ದೇಶಕರು (ಕೇಂದ್ರ) ಜಂಟಿ ಕೃಷಿ ನಿರ್ದೇಶಕರ ಕಛೇರಿ, ರಾಮನಗರ ಇವರ ವಿಚಾರಣಾ ವರದಿ ದಿನಾಂಕ: 8/17–2–2016.
14. ಇಲಾಖಾ ಎರಡನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ 5/13/2013–14 ದಿನಾಂಕ 17–3–2015.
15. ಶ್ರೀ ಕರಿಗೌಡ ಗ್ರೂಫ್ ಡಿ ನೌಕರರು ಇವರ ಮನವಿ ದಿನಾಂಕ: 4–5–2016.

**ಪ್ರಸ್ತಾವನೆ :–**

ಶ್ರೀ ಕರೀಗೌಡ, ಗ್ರೂಫ್ 'ಡಿ' ನೌಕರರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಚನ್ನಪಟ್ಟಣ ಇವರು ಪದೇ ಪದೇ ಕಛೇರಿಗೆ ಅನಧಿಕೃತ ಗೈರು ಹಾಜರಾಗುತ್ತಿದ್ದ ಬಗ್ಗೆ ಸಹಾಯಕ ಕೃಷಿ ನಿರ್ದೇಶಕರು, ಚನ್ನಪಟ್ಟಣ ತಾಲ್ಲೂಕುನವರು ಓದಲಾದ ಕ್ರ.ಸಂ (2) ರಲ್ಲಿ ಸಲ್ಲಿಸಿರುವ ಮಾಹಿತಿಯೊಂದಿಗೆ ಪ್ರಸ್ತಾವನೆಯನ್ನು ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆಯವರು ಇಲಾಖೆಗೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಇದಕ್ಕೆ ಸಂಬಂಧಪಟ್ಟ ನಿಖರವಾದ ಮಾಹಿತಿಯನ್ನು ಓದಲಾದ ಕ್ರ.ಸಂ. (3)ರ ಇಲಾಖಾ ಪತ್ರಗಳಲ್ಲಿ ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆಯವರಿಗೆ ಒದಗಿಸಲು ತಿಳಿಸಲಾಗಿತ್ತು. ಓದಲಾದ ಕ್ರ.ಸಂ (4) ರಲ್ಲಿ ಶ್ರೀ ಕರೀಗೌಡ, ಗ್ರೂಫ್ 'ಡಿ' ನೌಕರರು, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ದಾಖಲಾತಿಗಳ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸಿ ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆಯವರು ಇಲಾಖೆಗೆ ಸಲ್ಲಿಸಿರುತ್ತಾರೆ. ಓದಲಾದ ಕ್ರ ಸಂ. (5) ರಲ್ಲಿ ಸದರಿ ನೌಕರರ ವಿರುದ್ಧ ಅನುಬಂಧ–1 ರಿಂದ 4 ರವರೆಗೆ ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಸಲ್ಲಿಸಲು ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆಯವರಿಗೆ ಸೂಚಿಸಲಾಗಿತ್ತು. ಓದಲಾದ ಕ್ರಮಸಂಖ್ಯೆ (6)ರಲ್ಲಿ ಜಂಟಿ ಕೃಷಿ ನಿರ್ದೇಶಕರು, ರಾಮನಗರ ಜಿಲ್ಲೆಯವರು ಅನುಬಂಧ–1 ರಿಂದ 4ರವರೆಗೆ ದೋಷಾರೋಪಣಾ ಪಟ್ಟಿಯನ್ನು ಇಲಾಖೆಗೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ಸದರಿ ನೌಕರರ ವಿರುದ್ಧ ಓದಲಾದ ಕ್ರ.ಸಂ. (7) ರಲ್ಲಿ ಶ್ರೀ ಕರೀಗೌಡ, ಗ್ರೂಫ್ 'ಡಿ' ನೌಕರರು, ಇವರಿಗೆ ದೋಷಾರೋಪಣಾ ಪಟ್ಟಿ ಅನುಬಂಧ–1 ರಿಂದ 4ನ್ನು ಜಾರಿ ಮಾಡಲಾಯಿತು. ಜಾರಿ ಮಾಡಲಾದ ದೋಷಾರೋಪಣಾ ಪಟ್ಟಿಯನ್ನು ಓದಲಾದ ಕ್ರ.ಸಂ. (8) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಚನ್ನಪಟ್ಟಣ ತಾಲ್ಲೂಕುರವರು ಜಾರಿ ಮಾಡಿ ಸ್ವೀಕೃತಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ. (9) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಚನ್ನಪಟ್ಟಣ ತಾಲ್ಲೂಕುರವರ ಮುಖಾಂತರ ಶ್ರೀ ಕರೀಗೌಡ, ಡಿ–ಗ್ರೂಪ್ ನೌಕರರು ಇವರ ರಕ್ಷಣಾ ಹೇಳಿಕೆಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಸದರಿ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿ ಅವರ ವಿರುದ್ಧ ಮಾಡಲಾದ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ. ಆದ್ದರಿಂದ ನೌಕರರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ವಿವರವಾದ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಕ ಮಾಡಲು ನಿರ್ಧರಿಸಿ ಓದಲಾದ ಕ್ರ.ಸಂ. (10) ರಲ್ಲಿ ನೇಮಿಸಲಾಗಿತ್ತು. ಆದರೆ ಓದಲಾದ ಕ್ರ.ಸಂ. (11) ರಲ್ಲಿ ಶ್ರೀ ಡಿ. ವೆಂಕಟೇಶಮೂರ್ತಿ, ಅಧೀಕ್ಷಕರು ಹಾಗೂ ಮಂಡನಾಧಿಕಾರಿ, ಸದರಿಯವರ ಅನಾರೋಗ್ಯದ ನಿಮಿತ್ತ ಸಲ್ಲಿಸಿದ್ದ ಮನವಿಯನ್ನು ಪರಿಗಣಿಸಿ ಮಂಡನಾಧಿಕಾರಿಯವರನ್ನು ಓದಲಾದ ಕ್ರ.ಸಂ. (12) ರಲ್ಲಿ ಬದಲಾಯಿಸಿ ಶ್ರೀ ಜೆ. ಪಾತಲಿಂಗಪ್ಪ, ಆಡಳಿತ ಸಹಾಯಕರು, ಕೇಂದ್ರ ಕಛೇರಿ ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ಓದಲಾದ ಕ್ರ.ಸಂ. (13) ರಲ್ಲಿ ವಿಚಾರಣಾ ವರದಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಅವರ ವಿರುದ್ಧ ಮಾಡಲಾದ ಎರಡು ಆರೋಪಗಳು ಸಾಬೀತಾಗಿರುತ್ತವೆ. ವಿಚಾರಣಾ ವರದಿಯನ್ನು ಲಗತ್ತಿಸಿ ಓದಲಾದ ಕ್ರ.ಸಂ. (14) ರಲ್ಲಿ ಸದರಿಯವರಿಗೆ ಎರಡನೇ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಗಿದೆ. ಎರಡನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಓದಲಾದ ಕ್ರ.ಸಂ. (15) ರಲ್ಲಿ ಸದರಿ ನೌಕರರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಅವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿ ಆರೋಪ–1ನ್ನು ಒಪ್ಪಿ ಅದಕ್ಕೆ ಸಂಬಂಧಿಸಿದಂತೆ ಕರ್ತವ್ಯಕ್ಕೆ ಗೈರು ಹಾಜರಾದ ದಿನಗಳಿಗೆ ಅವರ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಲು ಹಾಗೂ ಉಳಿದ ಅವಧಿಯನ್ನು ಅಸಾಧಾರಣ ರಜೆಯನ್ನಾಗಿ ಮಂಜೂರು ಮಾಡಲು ಕೋರಿರುತ್ತಾರೆ. 2ನೇ ಆರೋಪಕ್ಕೆ ಸಂಬಂಧಿಸಿದಂತೆ ಅವರ ವಿರುದ್ಧ ಮಾನ್ಯ ಜಡ್ಜ್ ಮತ್ತು

ಜೆ.ಎಂ.ಎಫ್.ಸಿ. ನ್ಯಾಯಾಲಯ ಆಲೂರು ಇಲ್ಲಿ ದಾಖಲಾಗಿದ್ದ ಕ್ರಿಮಿನಲ್ ಮಿಸ್‌ಲೇನಿಯಸ್ ಸಂಖ್ಯೆ 80/2006 ಇತ್ಯರ್ಥವಾಗಿದ್ದು ಸದರಿ ತೀರ್ಪಿನ ಪ್ರತಿಯನ್ನು ಅವರ ಮನವಿಯೊಂದಿಗೆ ಲಗತ್ತಿಸಿ ದಸ್ತಗಿರಿ ವಾರೆಂಟ್ ಅರ್ಜಿಗೆ ತಡೆಯಾಜ್ಞೆ ಇರುವುದರಿಂದ ಆರೋಪ–2ನ್ನು ಕೈ ಬಿಟ್ಟು ಅವರಿಗೆ ದಂಡನೆ ವಿಧಿಸುವಾಗ ಸಹಾನುಭೂತಿಯಿಂದ ಪರಿಗಣಿಸಿ ಮತ್ತು ಸರ್ಕಾರಿ ಕೆಲಸದಲ್ಲಿ ಮುಂದುವರೆಯಲು ಅವಕಾಶಮಾಡಿಕೊಡಲು ಕೋರಿರುತ್ತಾರೆ.

ವಿಚಾರಣೆಯಲ್ಲಿ ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸದರಿ ಆರೋಪಿತ ನೌಕರರನ್ನು ಆರೋಪಿ ಎಂದು ಪರಿಗಣಿಸಿ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಯಿತು.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–5/13/2013–14 ದಿನಾಂಕ: 08–08–2016.**

ಈ ಕೆಳಗೆ ಸಹಿ ಮಾಡಿರುವ ಶ್ರೀ ಬಿ.ವೈ. ಶ್ರೀನಿವಾಸ ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಆದ ನಾನು ಈ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಕರೀಗೌಡ, ಗ್ರೂಪ್ 'ಡಿ' ನೌಕರರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಚನ್ನಪಟ್ಟಣ ಇವರ ವಿರುದ್ದದ ಆರೋಪಗಳು ವಿಚಾರಣೆಯಲ್ಲಿ ಸಾಭೀತಾಗಿರುವುದರಿಂದ ಇವರನ್ನು **"ಆರೋಪಿ"** ಎಂದು ಪರಿಗಣಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (vi) ರನ್ವಯ ಈ ಕೆಳಕಂಡ ದಂಡನೆ ವಿಧಿಸಿ ಆದೇಶಿಸಿರುತ್ತೇನೆ.

ಸದರಿಯವರನ್ನು ಸರ್ಕಾರಿ ಸೇವೆಯಿಂದ **" ಕಡ್ಡಾಯ ನಿವೃತ್ತಿ"** ಗೊಳಿಸಿ ಆದೇಶಿಸಿರುತ್ತೇನೆ. ಹಾಗೂ ಸದರಿಯವರ ಅನಧಿಕೃತ ಗೈರು ಹಾಜರಿ ಅವಧಿಯನ್ನು **"ಅನಧಿಕೃತ ಗೈರು ಹಾಜರಿ"** ಅವಧಿ ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

**PR-684**

**SC. 10**

**ಬಿ. ವೈ. ಶ್ರೀನಿವಾಸ,**
ಕೃಷಿ ನಿರ್ದೇಶಕರು ಹಾಗೂ
ಶಿಸ್ತು ಪ್ರಾಧಿಕಾರಗಳು. ಬೆಂಗಳೂರು–1

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

## IN THE COURT OF AUTHORISIED OFFICER AND DEPUTY CONSERVATOR OF FORESTS, KARWAR DIVISION, KARWAR

**ಕ್ರಸಂ. ಬಿ1/ಎಫ್‌ಓಸಿ/ವಿವ–11/2004–05, ಕಾರವಾರ, ದಿನಾಂಕ: 30–07–2016.**

**ಉಪಸ್ಥಿತರು:** ಶ್ರೀ ಗಣಪತಿ ಕೆ., ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ,
ಮಾಸ್ತಿಕಟ್ಟಾ, (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು:** ಶ್ರೀಮತಿ ಆಶಾ ಗಜಾನನ ನಾಯಕ
ಸಾ. ಕೆಪಿಟಿಸಿಎಲ್, ಅಂಕೋಲಾ ಹತ್ತಿರ. ತಾಲ್ಲೂಕು: ಅಂಕೋಲಾ, ಜಿಲ್ಲೆ: ಉತ್ತರ ಕನ್ನಡ.
(ಅರ್ಜಿದಾರರ ಪರವಾಗಿ ಶ್ರೀ ಡಿ.ಎನ್. ನಾಯಕ, ವಕೀಲರು)

**ಪ್ರಸ್ತಾವನೆ :–**

1. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ಪ್ರಾಧಿಕಾರಕ್ಕೆ ದಿನಾಂಕ:23–09–2004 ರಂದು ವರದಿ ಸಲ್ಲಿಸುತ್ತಾ ದಿನಾಂಕ: 21–09–2004 ರಂದು ರಾತ್ರಿ ಗಸ್ತು ನಿಯೋಜಿಸಿದ ಸಿಬ್ಬಂದಿಗಳು ಇಲಾಖಾ ವಾಹನ ಸಂಖ್ಯೆ: ಕೆಎ–30/ಜಿ–01ರ ಮೇಲೆ ಸುಮಾರು 12–00 ಘಂಟೆಯ ಸಮಯಕ್ಕೆ ಸುಂಕಸಾಳ ಸಿಬ್ಬಂದಿಗಳನ್ನು ಕೂಡಿಕೊಂಡು ಹೈಲ್ಯಾಂಡ್ ವರೆಗೆ ಗಸ್ತು ತಿರುಗುತ್ತಾ ನಂತರ ತಿರುಗಿ ಹೊಸಕಂಬಿ, ಮಾಸ್ತಿಕಟ್ಟಾ, ಹೊನ್ನಳ್ಳಿ ಬ್ರಿಡ್ಜನ ವರೆಗೆ ತಿರುಗುತ್ತಾ ಎರಡನೇ ಸುತ್ತಿನಲ್ಲಿ ಸುಮಾರು ಬೆಳಗ್ಗಿನ ಜಾವ 4.00 ಗಂಟೆಯ ಸಮಯಕ್ಕೆ ಕೆಲವು ಸೂಕ್ಷ್ಮ ಪ್ರದೇಶಗಳಾದ ಬಡಿಗೋಣ ಪ್ಲಾಂಟೇಶನ್ ಹೆಬ್ಬುಳ ಮಾರ್ಗವಾಗಿ ಬೊಕ್ಸ ಕಟಿಂಗ್ ಪ್ಲಾಂಟೇಶನ್ ಪರಿಶೀಲಿಸುತ್ತಾ ಸುಂಕಸಾಳ ಬ್ರಿಡ್ಜಿನ ಮುಂದೆ ಹೋಗಿ ಎನ್.ಹೆಚ್–63ರ ಲಗ್ತ ಸಾಗ ಪ್ಲಾಂಟೇಶನ್‌ನಲ್ಲಿ ಒಂದು ಟಿಪ್ಪರ ವಾಹನ ನಿಂತಿರುವುದು ಕಂಡು ಬಂದು ಸಿಬ್ಬಂದಿಗಳು ಅನುಮಾನ ಬಂದು ಸದರ ವಾಹನವನ್ನು ಪರಿಶೀಲಿಸಲು ಹೋದಾಗ ಇಲಾಖಾ ವಾಹನವನ್ನು ಕಂಡು ಟಿಪ್ಪರ ವಾಹನದಲ್ಲಿದ್ದ ಆರೋಪಿಗಳು ಪರಾರಿಯಾಗಿರುತ್ತಾರೆ. ಈ ಘಟನೆ ನಡೆದ ಸಮಯವು ಅಂದಾಜು ಬೆಳಗ್ಗಿನ ಜಾವ 5.30 ಘಂಟೆ ಆಗಿದ್ದು ಸದರ ವಾಹನ ಮತ್ತು ಮಾಲಿನ ಬಗ್ಗೆ ಸ್ಥಳ ಪರಿಶೀಲನೆಯಿಂದ ಪಂಚನಾಮೆ ಬರೆದುಕೊಡಲು ಆಸುಪಾಸು ಜನರು ಯಾರೂ ಸಿಗದೇ ಇದ್ದ ಕಾರಣ, ರಾತ್ರಿಗಸ್ತಿನ ಸಿಬ್ಬಂದಿಗಳಲ್ಲಿ ಇಬ್ಬರನ್ನ ಪಂಚರನ್ನಾಗಿ ಮಾಡಿ ಪಂಚರ ಸಮಕ್ಷಮ ನಮ್ಮ ಸಿಬ್ಬಂದಿಗಳು ಸದರಿ ಟಿಪ್ಪರ ವಾಹನದ ಬಳಿ ಹೋಗಿ ಪರಿಶೀಲಿಸಿದಾಗ ಅದರ ನೋಂದಣಿ ಸಂಖ್ಯೆ: MEK–4048 ಇದ್ದು, ಸದರಿ ಗಾಡಿಯ ಮೇಲೆ ಸಾಗ ಜಾತಿ 21 ತುಂಡುಗಳು ಇದ್ದು ಸದರಿ ಸಾಗ ತುಂಡುಗಳ ಮೇಲೆ ಸರ್ಕಾರದ ಅಧಿಕೃತ ಮುದ್ರೆ ಯಾವುದೂ ಕಂಡು ಬಂದಿರುವುದಿಲ್ಲ. ಮತ್ತು ಸದರಿ ಟಿಪ್ಪರಿನ ಕ್ಯಾಬಿನ್ ಮೇಲೆ 4 ಅಡ್ಡಖರಗಸ, 1. ಪ್ಲೆಂಟಿಕ್ ತಾಡಪತ್ರೆ ಹಾಗೂ ಟಿಪ್ಪರಿನ ಕೆಳಗಡೆಗೆ ದಾಸ್ತಾನು ಇಟ್ಟ ಯಾವುದೇ ಛಪ್ಪಾ ವಗೈರೆ ಇಲ್ಲದ 7 ಸಾಗತುಂಡುಗಳು ಹಾಗೂ ಟಿಪ್ಪರಿನ ಒಳಗಡೆ ಪರಿಶೀಲಿಸಿದಾಗ ನಾಯಕ ಟ್ರಾನ್ಸಪೋರ್ಟ ಡೆಲಿವರಿ ಕ್ಯಾರಿ ಚಲನ ರಸೀದಿ ಮತ್ತು ಟಿಪ್ಪರಿನ ಚಾಲಕನಾದ ಶಂಕರ ಬಿ. ಕಲ್ಗುಟ್ಕರ, ಸಾ: ಕಲ್ಲಭಾಗ, (ಬೊಬ್ರುವಾಡಾ) ಇವರ ಡ್ರೈವಿಂಗ್ ಲೈಸನ್ಸ್ ಪ್ರತಿ ಇದ್ದದ್ದು ಕಂಡು ಬಂದಿತು, ಮುಂದುವರೆದು, ಸಿಬ್ಬಂದಿಗಳು ಸದರಿ ಗುನ್ನೆ ನಡೆದ ಜಾಗವು ಬ್ಲಾಕ್ ನಂ.24–16, ಘಾ.ಸ.ನಂ. 86 ರಲ್ಲಿ 1958ನೇ ಪ್ಲಾಂಟೇಶನ್ ಜಾಗ ಎಂದು ಖಾತ್ರಿಪಡಿಸಿಕೊಂಡರು. ನಂತರ ಗಾಡಿಯ ಮೇಲೆ ಹೇರಿದ ಮತ್ತು ಕೆಳಗಡೆ ಇದ್ದ ಸಾಗ ತುಂಡುಗಳ ಅಳತೆಯನ್ನು ಮಾಡಲಾಗಿ ಅವು 28=2.264 ಘ.ಮೀ. ಇದ್ದವು. ಸದರ ತುಂಡುಗಳನ್ನು ಹಾಗೂ ಟಿಪ್ಪರನ್ನು ಪಂಚನಾಮೆಯಡಿ ಜಪ್ತಪಡಿಸಿ, ತುಂಡುಗಳಿಗೆ ಟಿ ಛಪ್ಪಾ ಹಾಕಿ ಕೆಂಪು ಪೇಂಟಿನಿಂದ ನಂಬರ ಹಾಕಿ ಇಲಾಖಾ

ತಾಬಾ ತೆಗೆದುಕೊಳ್ಳಲಾಯಿತು. ಟಿಪ್ಪರಿನ ಮುಂದುಗಡೆ ಟಾಯರ್ ಮಣ್ಣಿನಲ್ಲಿ ಹೂತಿದ್ದು ಟಿಪ್ಪರ ಕೇಸರಿ ಬಣ್ಣದಿದ್ದು, ಮುಂದುಗಡೆ ಬೋರ್ಡಿನಲ್ಲಿ ಇಂಗ್ಲೀಷಿನಲ್ಲಿ ನಾಯಕ ಟ್ರಾನ್ಸಪೋರ್ಟ ಎಂದು ಹಸಿರು ಮತ್ತು ಕಪ್ಪು ಪೇಂಟಿನಲ್ಲಿ ಬರೆದಿದ್ದು, ಪೋನ ನಂ. 630981, 632645 ಎಂದು ಸಹ ಬರೆದಿದ್ದು ಇರುತ್ತದೆ. ಮುಂದುಗಡೆ ಬೋರ್ಡಿನ ನಂಬರ ಪ್ಲೇಟಿನಲ್ಲಿ ಹಳದಿ ಬಣ್ಣದ ಪೇಂಟಿನ ಮೇಲೆ ಕಪ್ಪು ಪೇಂಟಿನಿಂದ MEK–4048 ಬರೆದಿದ್ದು ಇರುತ್ತದೆ. ಸದರ ಗಾಡಿಯ ಇಂಜಿನ್ ನಂ. 692D01228805 ಚಾಸಿಸ್ ನಂ. HPT 1508 ಆಗಿರುತ್ತದೆ. ಸದರ ವಾಹನಕ್ಕೆ ಹಿಂದುಗಡೆ ನಾಲ್ಕು ಟಾಯರ್ ಮತ್ತು ಮುಂದುಗಡೆ ಎರಡು ಬೋಳಾದ ಬಟ್ಟಣ ಇಲ್ಲದ ಬೋಳ ಟಾಯರ್ ಇರುತ್ತದೆ. ಸದರಿ ಪಂಚನಾಮೆಯಿಂದ ಜಪ್ತಪಡಿಸಿಕೊಂಡ ತುಂಡುಗಳು, MEK–4048 ಟಿಪ್ಪರ ವಾಹನ, ಅಡ್ಡಖಿರಗಸ, ಪ್ಲಾಸ್ಟಿಕ್ ತಾಡಪಾತ್ರೆ, ಚಲನ ಪುಸ್ತಕ ಹಾಗೂ ಡ್ರೈವರ ಲೈಸನ್ಸ್ ಝೆರಾಕ್ಸ್ ಪ್ರತಿಗೆ ಕ್ರಮವಾಗಿ 1 ರಿಂದ 6 ಸಂಖ್ಯೆ ಎಂತಾ ನಮೂದಿಸಲಾಯಿತು. ವಾಹನವು ನಿಂತಿದ್ದ ಸ್ಥಳದ ಚೆಕ್‌ಬಂದಿ ಪೂರ್ವ, ದಕ್ಷಿಣ ಮತ್ತು ಉತ್ತರಕ್ಕೆ ಸಾಗ ಪ್ಲಾಂಟೇಶನ್, ಪಶ್ಚಿಮಕ್ಕೆ ಎನ್ ಹೆಚ್–63 ಕಾರವಾರ ಬಳ್ಳಾರಿ ರಸ್ತೆ ಇರುತ್ತದೆ. ಆದ್ದರಿಂದ ಜಪ್ತಿಪಡಿಸಿದ ವಾಹನ, ಸಾಗವಾನಿ ತುಂಡುಗಳು ಮತ್ತು ಇನ್ನಿತರ ವಸ್ತುಗಳನ್ನು ಅಕ್ರಮ ಸಾಗಾಣಿಕೆಗೆ ಬಳಸಿಕೊಂಡಿದ್ದನ್ನು ಖಾತ್ರಿಪಡಿಸಿ 71ಎ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಾಹನವನ್ನು ಜಪ್ತಪಡಿಸಲಾಯಿತು. ಆದ್ದರಿಂದ ಈ ಅರಣ್ಯ ಗುನ್ನೆ ಪ್ರಕರಣದಲ್ಲಿ ತೊಡಗಿಸಿಕೊಂಡ ವಾಹನ ಹಾಗೂ ಸಾಗ ನಗಗಳು 28=2.264 ಘ.ಮೀ. ಪ್ರಥಮ ಮಾಹಿತಿ ವರದಿ ಸಂಖ್ಯೆ: 6/2004–05 ದಿನಾಂಕ: 22–09–2004 ರಂತೆ ಗುನ್ನೆ ದಾಖಲಿಸಿಕೊಳ್ಳಲಾಯಿತು. ಗುನ್ನೆಗೆ ಬಳಸಿದ ವಾಹನ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969ರ ನಿಯಮ 144ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಪ್ತ ವಾಹನ ಮತ್ತು ಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ್ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಹಾಗೂ ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 27–10–2004 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದಲ್ಲಿ ಇರುವ ಆರ್.ಸಿ. ಪುಸ್ತಕ ಆಧಾರದ ಮೇಲೆ ಸದರಿ ವಾಹನವು ನಾಯಕ ಟ್ರಾನ್ಸ್‌ಪೋರ್ಟ ಇವರಿಗೆ ಸಂಬಂಧಿಸಿದ್ದು ಇರುತ್ತದೆ.

3. ಈ ಪ್ರಕರಣದ ವಿಚಾರಣೆಯನ್ನು ದಿನಾಂಕ: 12–09–2014, 17–10–2014, 14–11–2014, 12–12–2014, 23–01–2015, 13–02–2015, 12–06–2015, 24–07–2015, 21–08–2015, 25–09–2015, 15–10–2015, 30–10–2015, 27–11–2015 ಮತ್ತು 29–07–2016 ರಂದು ಈ ನ್ಯಾಯಾಲಯದಲ್ಲಿ ಇಟ್ಟುಕೊಳ್ಳಲಾಯಿತು.

4. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ವಿಚಾರಣೆ ಕಾಲಕ್ಕೆ ಹಾಜರಾಗಿರುತ್ತಾರೆ. ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಉತ್ತರಕನ್ನಡ ಕಾರವಾರ ರವರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರ ಪಿಡಬ್ಲೂ–1ರಿಂದ ಪಿಡಬ್ಲೂ–4 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲು–1. ಶ್ರೀ. ಕುಸ್ಲಪ್ಪ ಲಕ್ಷ್ಮಣ ನಾಯ್ಕ ಉಪ ವಲಯ ಅರಣ್ಯಾಧಿಕಾರಿ,

(ಹಾಲಿ ಕರ್ತವ್ಯ ಬಾಳೇಗುಳಿ ಶಾಖೆ, ಅಂಕೋಲಾ ವಲಯ)

ಪಿಡಬ್ಲು–2. ಶ್ರೀ. ಸುರೇಶ ನಾರಾಯಣ ಪಡ್ತಿ, ವಾಚಮನ್ ಸುಂಕಸಾಳ.

ಪಿಡಬ್ಲು–3. ಶ್ರೀ ಈಶ್ವರ ತುಕ್ಕಪ್ಪ ನಾಯ್ಕ, ನಿವೃತ್ತ ಉಪ ವಲಯ ಅರಣ್ಯಾಧಿಕಾರಿ, ವಾಸಸ್ಥಳ, ಬೊಬ್ರವಾಡ, ಅಂಕೋಲಾ.

ಪಿಡಬ್ಲು–4. ಶ್ರೀ ಕೆ.ಜಿ. ಪ್ರಕಾಶ, ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ

ಹಾಲಿ ಕರ್ತವ್ಯ ವನ್ಯಜೀವಿ ವಲಯ, ಫಣಸೊಲಿ)

ನಿಶಾನೆ ಪಿ–1 ರಿಂದ ಪಿ–6 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1: ಪಂಚನಾಮೆ

ನಿಶಾನೆ ಪಿ–2 &3. ವಾಹನದ ಛಾಯಾ ಚಿತ್ರ

ನಿಶಾನೆ ಪಿ–4: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–5: ತನಿಖಾ ವರದಿ

ನಿಶಾನೆ ಪಿ–6: ಫಾರ್ಮ ನಂ. 20

5. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

(ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ನಗಗಳು 28=2.264 ಘ. ಮೀ. ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ ?

(ಆ) ಈ ಮೇಲೆ ನಮೂದಿಸಿದ ಸಾಗ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ವಾಹನ ಸಂಖ್ಯೆ: MEK–4048 ಟಿಪ್ಪರ ವಾಹನ ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

(ಇ) ಈ ಗುನ್ನೆಯನ್ನು ವಾಹನದ ಮಾಲೀಕ/ಆಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) -- ಹೌದು

ಅಂಶ ನಂ. (ಆ) -- ಹೌದು

ಅಂಶ ನಂ. (ಇ) -- ಹೌದು

ಅಂಶ ನಂ. (ಈ) -- ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿಡಬ್ಲ್ಯು-1** ಶ್ರೀ ಕುಸ್ಲಪ್ಪ ಲಕ್ಷ್ಮಣ ನಾಯ್ಕ ಇವರು ತಮ್ಮ ಸಾಕ್ಷ್ಯದಲ್ಲಿ ಜನಾನು 2002 ರಿಂದ 2008 ವರೆಗೆ ಶಾಖಾ ವನಪಾಲಕ ಮಾಸ್ತಿಕಟ್ಟಾ ಅಂತಾ ಕೆಲಸ ಮಾಡಿರುತ್ತೇನೆ. ಶ್ರೀ ವಿ.ಎಸ್. ನಾಯಕ ಇವರು ಕಾಮಗಾರಿ ವನಪಾಲಕ ಹಾಗೂ ಪ್ರಭಾರಿ ವನಪಾಲಕರಿಗಾಗಿ ಸುಂಕಸಾಳ ಬೀಟಿನಲ್ಲಿ ಕೆಲಸ ಮಾಡುತ್ತಿದ್ದರು. ಅವರು ಈಗ ನಿವೃತ್ತಿ ಹೊಂದಿದ್ದು ಅನಾರೋಗ್ಯದಿಂದ ಬಳಲುತ್ತಿದ್ದಾರೆ. ಹಾಗೂ ನ್ಯಾಯಾಲಯಕ್ಕೆ ಬಂದು ಸಾಕ್ಷಿ ಹೇಳುವ ಸ್ಥಿತಿಯಲ್ಲಿ ಇರುವುದಿಲ್ಲ.

ದಿನಾಂಕ: 21-09-2004 ರಂದು ರಾತ್ರಿ 12.00 ಘಂಟೆಗೆ ನಾನು ಹೆಬ್ಬುಳದಲ್ಲಿ ನಿಂತಾಗ ಗಸ್ತು ನಿಯೋಜಿಸಿದ ಸಿಬ್ಬಂದಿಗಳು ಇಲಾಖಾ ವಾಹನದ ಮೇಲೆ ಸುಂಕಸಾಳದ ಸಿಬ್ಬಂದಿಗಳನ್ನು ಕರೆದುಕೊಂಡು ಹೊಸಕಂಬಿ ಮಾಸ್ತಿಕಟ್ಟಾ ಮಾರ್ಗವಾಗಿ ಗಸ್ತು ತಿರುಗುತ್ತಾ 2ನೇ ಸುತ್ತಿನಲ್ಲಿ ಬೆಳಗಿನ 4.00 ಘಂಟೆಯ ಸಮಯಕ್ಕೆ ಕೆಲವು ಸೂಕ್ಷ್ಮ ಪ್ರದೇಶಗಳಾದ ಬಡಿಗೋಣ ಪ್ಲಾಂಟೇಶನ ಹೆಬ್ಬುಳ ಮಾರ್ಗವಾಗಿ ಬಾಕ್ಸ್ ಕಟಿಂಗ್ ಪ್ಲಾಂಟೇಶನ ಪರಿಶೀಲಿಸುತ್ತ ಬಂದೆವು. ಈ ರೀತಿ ನಾನು ವಿ.ಎಸ್. ನಾಯ್ಕ ಮತ್ತು ಐ.ಟಿ. ನಾಯ್ಕ, ಬಾನು ಪೊಕ್ಕಾ ಗೌಡ ಹಾಗೂ ಸುರೇಶ ನಾರಾಯಣ ಪಡ್ತಿ ಗಸ್ತಿಗೆ ಬಂದೆವು. ನಾವು ಎನ್ ಹೆಚ್-63 ರ ಲಗ್ತ ಸಾಗ ಪ್ಲಾಂಟೇಶನದಲ್ಲಿ ಒಂದು ಟಿಪ್ಪರ ವಾಹನ ನಿಂತಿರುವುದನ್ನು ನೋಡಿದೆವು. ಆಗ ನಮಗೆ ಅನುಮಾನ ಬಂದು ಪರಿಶೀಲಿಸಲು ಅದರ ಹತ್ತಿರ ನಮ್ಮ ವಾಹನವನ್ನು ತೆಗೆದುಕೊಂಡು ಹೋಗಬೇಕಾದರೆ ನಮ್ಮ ಜೀಪನ್ನು ನೋಡಿ ಆರೋಪಿಗಳು ಓಡಿ ಹೋಗಿರುತ್ತಾರೆ. ನಂತರ ನಾವು ವಾಹನದಿಂದ ಕೆಳಗೆ ಇಳಿದು ಪರಿಶೀಲಿಸಲಾಗಿ ಅದು ಎಂ.ಇ.ಕೆ.-4048 ಇದ್ದು ಅದರ ಮೇಲೆ ಸಾಗ ತುಂಡುಗಳನ್ನು ಹೇರಿದ್ದು ಕಂಡು ಬಂದಿತು. ನಾವೆಲ್ಲರೂ ಸೇರಿ ಪರಿಶೀಲಿಸಿದಾಗ ಅದರಲ್ಲಿ ಒಟ್ಟು 21 ಸಾಗ ತುಂಡುಗಳನ್ನು ಹೇರಿತ್ತು. ಟಿಪ್ಪರ ಕೆಳಭಾಗದಲ್ಲಿ 7 ಸಾಗ ತುಂಡುಗಳು ಇದ್ದವು ಹಾಗೂ ಟಿಪ್ಪರಿನ ಮುಂದಿನ ಟಾಯರ್ ನೆಲದಲ್ಲಿ ಹೂತು ಹೋಗಿತ್ತು. ಸದರ ಸಾಗ ತುಂಡುಗಳನ್ನು ಪರಿಶೀಲಿಸಲಾಗಿ ಅದಕ್ಕೆ ಯಾವುದೇ ಸರ್ಕಾರದ ಅಧಿಕೃತ ಮುದ್ರೆಗಳು ಇರಲಿಲ್ಲ. ಆಗ ಬೆಳಕು ಆಗಿದ್ದರಿಂದ ನಾವು ಮುಂದೆ ಪ್ಲಾಂಟೇಶನ ಹೋಗಿ ಪರಿಶೀಲಿಸಿದೆವು. ಅಲ್ಲಿ ಸುಮಾರು 10 ಸಾಗ ಮರಗಳನ್ನು ಕಡಿಯಲಾಗಿತ್ತು. ಅದನ್ನು ನೋಡಿ ಸದ್ರಿ, ಸಾಗ ಮರಗಳಿಂದಲೇ ಈ ತುಂಡುಗಳನ್ನು ತಯಾರಿಸಿ ಟಿಪ್ಪರಿನಲ್ಲಿ ಹೇರಿದ್ದು ಖಾತ್ರಿಯಾಗಿತ್ತು. ರಾತ್ರಿಯಾಗಿದ್ದರಿಂದ ಹಾಗೂ ಸ್ಥಳದಲ್ಲಿ ಯಾವುದೇ ಸ್ಥಳೀಕರು ಇಲ್ಲದೇ ಇದ್ದ ಕಾರಣ, ಇಲಾಖಾ ಸಿಬ್ಬಂದಿಗಳನ್ನೇ ಪಂಚರನ್ನಾಗಿ ಮಾಡಿಕೊಂಡು ಪಂಚನಾಮೆಯನ್ನು ಬರೆಯಲಾಗಿತ್ತು. ಟಿಪ್ಪರ ಮೇಲೆ ಹಾಗೂ ಕೆಳಗೆ ಇದ್ದ ಒಟ್ಟು ತುಂಡುಗಳು ಸೇರಿ 28 ತುಂಡುಗಳಾಗಿದ್ದು ಅದು ಒಟ್ಟು 2.264 ಘ.ಮೀ. ಇತ್ತು. ಹಾಗೂ ಅದರಲ್ಲಿ ಗಿಡ ಕಡಿಯಲು ಉಪಯೋಗಿಸಿದಂತಹ ಕರಗಸ, ತಾಡಪತ್ರಿ ಇತ್ತು. ಟಿಪ್ಪರನ ಒಳಭಾಗದಲ್ಲಿ ಒಂದು ಲೈಸನ್ಸ್ ಮತ್ತು ನಾಯ್ಕ ಟ್ರಾನ್ಸಪೋರ್ಟ ರಸೀದಿ ಪುಸ್ತಕ ಇತ್ತು. ಎಲ್ಲಾ ವಸ್ತುಗಳಿಗೆ 1 ರಿಂದ 6ನೇ ನಂಬರ ಕೊಡಲಾಯಿತು. ಹಾಗೂ ಮೇಲೆ ಹೇಳಿದ ಸಾಗ ತುಂಡುಗಳನ್ನು, ಟಿಪ್ಪರ, ಅಡ್ಡಕರಗಸಗಳನ್ನು, ತಾಡಪತ್ರಿ, ಚಲನ್ ಪುಸ್ತಕ ಹಾಗೂ ಡ್ರೈವರ್ ಲೈಸನ್ಸ್‌ಗಳಿಗೆ ಕ್ರಮವಾಗಿ 1 ರಿಂದ 6 ನಂಬರ ಕೊಟ್ಟು ಪಂಚನಾಮೆ ಬರೆದು ಜಪ್ತಿ ಪಡಿಸಿಕೊಳ್ಳಲಾಯಿತು. ಪಂಚನಾಮೆ ಹಾಗೂ ಅದರಲ್ಲಿದ್ದ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಪಂಚನಾಮೆಯನ್ನು ನಿಪಿ-1 ಹಾಗೂ ಸಾಕ್ಷಿಯ ಸಹಿಯನ್ನು ನಿಪಿ-1ಎ ಎಂದು ಗುರುತಿಸಲಾಯಿತು. ಪಂಚನಾಮೆಯನ್ನು ನಾನೇ ಬರೆದಿರುತ್ತೇನೆ. ಪಂಚನಾಮೆ ಬರೆದಾಗ ದಿನಾಂಕ:22-09-2004 ರ ಬೆಳಗ್ಗಿನ ಜಾವ 6.30 ಘಂಟೆಯಿಂದ 7.30 ಘಂಟೆಯಾಗಿತ್ತು. ಜಪ್ತಿ ಪಡಿಸಿದ ವಾಹನದ ಫೋಟೋವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿಪಿ-2 ಮತ್ತು 3 ಎಂದು ಗುರುತಿಸಲಾಯಿತು. ನಂತರ ವಲಯ ಕಛೇರಿಗೆ ಹಿಂದಿರುಗಿ ವಿ.ಎಸ್. ನಾಯ್ಕ ಇವರು ಆರೋಪಿತರ ವಿರುದ್ಧ ಪ್ರವಾ ವರದಿಯನ್ನು ದಾಖಲಿಸಿದ್ದು, ಅದನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ.-4 ಹಾಗೂ ವಿ.ಎಸ್. ನಾಯ್ಕ ಇವರ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ ಮೇರೆಗೆ ವಿ.ಪಿ.-4ಎ ಎಂದು ಗುರುತಿಸಲಾಯಿತು. ನಂತರ ಈ ಪ್ರಕರಣದ ತನಿಖೆಯನ್ನು ಸುಂಕಸಾಳ ವನಪಾಲಕರಾದ ಶ್ರೀ ಡಿ.ಬಿ. ಗಜಿನಕರ ಇವರು ಮಾಡಿ ತನಿಖಾ ವರದಿಯನ್ನು ವಲಯ ಅರಣ್ಯಾಧಿಕಾರಿಗಳಿಗೆ ಸಲ್ಲಿಸಿರುತ್ತಾರೆ. ಹಾಗೂ ಸಾಗ ಮರಗಳನ್ನು ಕಡಿದ ಬ್ಲಾಕ್ ನಂ. 24-16 ನೆಡುತೋಪಿನಲ್ಲಿ ಮುರವಣಿ ಪಂಚನಾಮೆಯನ್ನು ಶ್ರೀ ವಿ.ಎಸ್. ನಾಯ್ಕ ಇವರು ಮಾಡಿರುತ್ತಾರೆ. ಸಾಕ್ಷಿ ಗುರುತಿಸಿದ ತನಿಖಾ ವರದಿಯನ್ನು ನಿ.ಪಿ.-5 ಎಂದು ಗುರುತಿಸಲಾಯಿತು. ಮಾನ್ಯ ವಲಯ ಅರಣ್ಯಾಧಿಕಾರಿಗಳು ಜಪ್ತಿಪಡಿಸಿದ ಮ್ಹಾಲಿನ ಬಗ್ಗೆ ನ್ಯಾಯಾಲಯಕ್ಕೆ ಫಾರ್ಮ ನಂ. 20ನ್ನು ಸಲ್ಲಿಸಿದ್ದು ಅದನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ.-6 ಎಂದು ಗುರುತಿಸಲಾಯಿತು. ಮೇಲ್ಕಂಡ ವಾಹನವನ್ನು ಅನಧಿಕೃತವಾಗಿ ಸರ್ಕಾರಕ್ಕೆ ಸೇರಿದ ಸಾಗ ತುಂಡುಗಳನ್ನು ಸಾಗಾಟ ಮಾಡಲು ಪ್ರಯತ್ನಿಸಿದ್ದು, ಸದರಿ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಅರಿಕೆ ಇದೆ ಎಂದು ಹೇಳಿಕೆ ನೀಡಿರುತ್ತಾರೆ.

**ಪಾಟೀ ಸವಾಲು: ದಿನಾಂಕ: 13-2-2015 ರಂದು ಪುನಃ ಪ್ರಾಸಾ-1 ರವರನ್ನು ಕರೆಯಿಸಿ ಶ್ರೀ ಡಿ.ಎನ್.ಎನ್ ವಕೀಲರು ಅರ್ಜಿದಾರರ ಪರವಾಗಿ ಪಾಟೀ ಸವಾಲು ಮಾಡಿರುತ್ತಾರೆ.**

ಪ್ರಾಸಾ-1 ರವರು ಪಾಟೀ ಸವಾಲಿಗೆ ಉತ್ತರಿಸುತ್ತಾ ಘಟನೆ ನಡೆದ ಸಮಯಕ್ಕೆ ಆರೋಪಿತರು ಕತ್ತಲಲ್ಲಿ ಓಡಿಹೋಗಿದ್ದರಿಂದ ನಮಗೆ ಅವರಿಗೆ ನೋಡಲು ಆಗಲಿಲ್ಲ. ಸಾಧಾರಣಾ 50 ರಿಂದ 100 ಮೀಟರ ಅಂತರದಲ್ಲಿ ನಾವು ಆರೋಪಿತರನ್ನು ನೋಡಿದೆವು. ನಾವು ಆದಿನ ಒಟ್ಟು 5 ಜನ ಇದ್ದು ಆರೋಪಿತರನ್ನು ಹಿಡಿಯಲು ಪ್ರಯತ್ನ ಪಟ್ಟೆವು ಆದರೆ ಸಿಗಲಿಲ್ಲ. ಅಲ್ಲಿ ಯಾವುದೇ ಹೆಂಗಸರು ಇರಲಿಲ್ಲ. ನಾನು ಆರೋಪಿತರು ಓಡಿ ಹೋಗಿದ್ದಾರೆ ಎಂದು ಹೇಳಿದರೆ ಸರಿಯಲ್ಲ. ಮರಗಳನ್ನು ಕಡಿದ ಬಗ್ಗೆ ಬುಡಚಿ ಪಂಚನಾಮೆ ಮಾಡಿದ್ದೂ ಒಟ್ಟು 10 ಬುಡಚಿಗಳು ಇದ್ದವು. ಸದರಿ ಪಂಚನಾಮೆಯನ್ನು ಬೀಟ ಗಾರ್ಡ ಮತ್ತು ಸುಂಕಸಾಳ ವನಪಾಲಕರು ಮಾಡಿರುತ್ತಾರೆ. ಫಿರ್ಯಾದುದಾರರು ನಮ್ಮ ಇಲಾಖೆಯ ಅಧಿಕಾರಿಗಳು ಹಾಗೂ ನನ್ನ ಸಹದ್ಯೋಗಿ ಎಂದರೆ ಸರಿ. ಘಟನಾ ಸ್ಥಳದಿಂದ ರಾಷ್ಟ್ರೀಯ ಹೆದ್ದಾರಿ ಅಂತರ ಸುಮಾರು 100 ಮೀಟರ ಆಗಬಹುದು. ಘಟನಾ ಸ್ಥಳದಿಂದ ಒಂದು ಕಿ.ಮೀ. ಅಂತರದಲ್ಲಿ ವಾಸ್ತವ್ಯದ ಮನೆಗಳು ಇವೆ. ಆ ಸಮಯದಲ್ಲಿ ಬೆಳಗ್ಗಿನ ಜಾವ ಆದ್ದರಿಂದ ರಾಷ್ಟ್ರೀಯ ಹೆದ್ದಾರಿಯಲ್ಲಿ ಜನಸಂಚಾರ ಹಾಗೂ ವಾಹನ ಸಂಚಾರ ಇರಲಿಲ್ಲ. ಈ ಪ್ರಕರಣದ

ಎಲ್ಲಾ ಸಾಕ್ಷಿದಾರರು ಇಲಾಖಾ ಸಾಕ್ಷಿದಾರರು ಎಂದರೆ ಸರಿ. ಪಂಚನಾಮೆ ಕಾಲಕ್ಕೆ ಒಂದು ಘಂಟೆಯೊಳಗೆ ಯಾವುದೇ ವಾಹನ/ಜನರ ಓಡಾಟ ಇರಲಿಲ್ಲ. ಆ ಜಾಗದಲ್ಲಿ ಯಾವುದೇ ವಾಹನ ರಸ್ತೆ ತಡೆ ಇರಲಿಲ್ಲ. ಹಾಜರುಪಡಿಸಿದ ದಾಖಲೆಗಳನ್ನು ಸೃಷ್ಟಿಪಡಿಸಿಕೊಂಡು ಹಾಜರುಪಡಿಸಿದ್ದೇವೆ ಎಂದರೆ ಸರಿಯಲ್ಲ. ಪ್ರ.ವ. ವರದಿಯನ್ನು ಗುನ್ನಾ ಸ್ಥಳದಲ್ಲಿಯೇ ತಯಾರಿಸಿದ್ದೇವೆ. ಕಛೇರಿಯಲ್ಲಿ ಪ್ರ.ವ ವರದಿ ತಯಾರಿಸಿಕೊಂಡು ಈಗ ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ನಾನು ಹೇಳುವಂತೆ ಅರ್ಜಿದಾರನು ವಾಹನವನ್ನು ಅರಣ್ಯ ಕಳ್ಳ ಸಾಗಾಣಿಕೆಗೆ ಉಪಯೋಗಿಸಿಲ್ಲ ಎಂದರೆ ಸರಿಯಲ್ಲ. ಅರಣ್ಯ ಮರಗಳನ್ನು ಕಡಿದ ಸ್ಥಳ ಅರಣ್ಯ ಎಂದು ತೋರಿಸುವ ಬಗ್ಗೆ ನಾವು ದಾಖಲೆಗಳನ್ನು ಹಾಜರುಪಡಿಸಿದ್ದೇವೆ. ಅದು ಸಾಗವಾನಿ ನೆಡುತೋಪುಗಳಾಗಿರುತ್ತವೆ. ನಾವು ಹಾಜರುಪಡಿಸಿದ ದಾಖಲೆಗಳ ಬಗ್ಗೆ ನನಗೆ ಮಾಹಿತಿಯಿಲ್ಲ ಎಂದರೆ ಸರಿಯಲ್ಲ. ಅರಣ್ಯ ಅಧಿಕಾರಿಗಳ ಕರ್ತವ್ಯ ಲೋಪದಿಂದ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಾಗುತ್ತಿದೆ ಎಂಬ ಬಗ್ಗೆ ವರ್ತಮಾನ ಪತ್ರಿಕೆಯಲ್ಲಿ ಸುದ್ದಿ ಬಂದಿತು ಎಂದರೆ ಸರಿಯಲ್ಲ. ಆ ಕಾರಣಕ್ಕಾಗಿ ಅಂಕಿ-ಸಂಖ್ಯೆಗೋಸ್ಕರ ನಾವು ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇವೆ ಎಂದರೆ ಸರಿಯಲ್ಲ. ಕಾರಣ ನಾವು ಕೇವಲ ಇಲಾಖಾ ಸಾಕ್ಷಿಗಳನ್ನು ನಮೂದಿಸಿಕೊಂಡು ಸುಳ್ಳು ಪ್ರಕರಣ ಮಾಡಿದ್ದೇವೆ ಎಂದರೆ ಸರಿಯಲ್ಲ. ಸದರಿ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಗೆ ಉಪಯೋಗಿಸಿದ್ದು ಇಲ್ಲಾ ಎಂದರೆ ಸರಿಯಲ್ಲ ಹಾಗೂ ವಾಹನದಲ್ಲಿ ಅನಧಿಕೃತವಾಗಿ ಸಾಗವಾನಿ ತುಂಡುಗಳನ್ನು ಸಾಗಿಸುತ್ತಿರಲಿಲ್ಲ ಎಂದರೆ ಸರಿಯಲ್ಲ ದಿನಾಂಕ: 22-09-2004 ರಂದು ಟಿಪ್ಪರ ವಾಹನದ ಮೇಲೆ ಸಾಗ ತುಂಡುಗಳನ್ನು ಸಾಗಿಸುತ್ತಿದ್ದ ಬಗ್ಗೆ ನಾವು ನಿ.ಪಿ-1 ರಂತೆ ಪಂಚನಾಮೆಯನ್ನು ಮಾಡಿಲ್ಲ ಎಂದರೆ ಸರಿಯಲ್ಲ. ನಾನು ಮುಖ್ಯ ವಿಚಾರಣೆಯಲ್ಲಿ ಹೇಳಿದ ಸಂಗತಿಗಳು ಸತ್ಯಕ್ಕೆ ದೂರವಾಗಿದೆ ಎಂದರೆ ಸರಿಯಲ್ಲ. ಜಪ್ತಿ ಪಡಿಸಿದ ವಾಹನಕ್ಕೂ ಹಾಗೂ ಸಾಗ ತುಂಡುಗಳಿಗೂ ಮತ್ತು ಅರ್ಜಿದಾರರಿಗೂ ಯಾವುದೇ ಸಂಬಂಧ ಇಲ್ಲಾ ಎಂದರೆ ಸರಿಯಲ್ಲ. ಎಂದು ಹೇಳಿರುತ್ತಾರೆ.

**ಪಿಡಬ್ಲು-2** ಶ್ರೀ. ಸುರೇಶ ನಾರಾಯಣ ಪಡ್ತಿ ಸಾ: ಸುಂಕಸಾಳ ಇವರು ತಮ್ಮ ಸಾಕ್ಷ್ಯದಲ್ಲಿ ನಾನು ಕಳೆದ 15 ವರ್ಷಗಳಿಂದ ನಾನು ಸುಂಕಸಾಳದಲ್ಲಿ ಅರಣ್ಯ ಇಲಾಖೆಯಲ್ಲಿ ವಾಚಮನ್ ಎಂದು ಕೆಲಸ ಮಾಡುತ್ತಿದ್ದೇನೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಪ್ರಾ.ಸಾ-1 ಇವರು ಶಾಖಾ ವನಪಾಲಕ, ಮಾಸ್ತಿಕಟ್ಟಾ ಎಂತಾ ಕೆಲಸ ಮಾಡುತ್ತಿದ್ದರು. ಶ್ರೀ ವಿ.ಎಸ್. ನಾಯ್ಕ ಇವರು ಕಾಮಗಾರಿ ವನಪಾಲಕ ಹಾಗೂ ಪ್ರಭಾರಿ ವನಪಾಲಕರಾಗಿ ಸುಂಕಸಾಳ ಬೀಟಿನಲ್ಲಿ ಕೆಲಸ ಮಾಡುತ್ತಿದ್ದರು.

ದಿನಾಂಕ: 21-09-2004 ರಂದು ರಾತ್ರಿ 12.00 ಘಂಟೆಗೆ ಗಸ್ತು ನಿಯೋಜಿಸಿದ ಸಿಬ್ಬಂದಿಗಳು ಇಲಾಖಾ ವಾಹನದ ಮೇಲೆ ಸುಂಕಸಾಳದ ಸಿಬ್ಬಂದಿಗಳನ್ನು ಕರೆದುಕೊಂಡು ಹೊಸಕಂಬಿ ಮಾಸ್ತಿಕಟ್ಟಾ ಮಾರ್ಗವಾಗಿ ಗಸ್ತು ತಿರುಗುತ್ತಾ 2 ನೇ ಸುತ್ತಿನಲ್ಲಿ ಬೆಳಗಿನ 4.00 ಘಂಟೆಯ ಸಮಯಕ್ಕೆ ಕೆಲವು ಸೂಕ್ಷ್ಮ ಪ್ರದೇಶಗಳಾದ ಬಡಿಗೋಣ ಪ್ಲಾಂಟೇಶನ್ ಹೆಬ್ಬುಳ ಮಾರ್ಗವಾಗಿ ಬಾಕ್ಸ್ ಕಟಿಂಗ್ ಪ್ಲಾಂಟೇಶನ್ ಪರಿಶೀಲಿಸುತ್ತ ಬಂದೆವು. ಈ ರೀತಿ ಕುಸ್ಲಪ್ಪ ಎಲ್. ನಾಯ್ಕ, ವಿ.ಎಸ್. ನಾಯ್ಕ, ಐ.ಟಿ. ನಾಯ್ಕ ಬಾನು ಪೊಕ್ಕಾ ಗೌಡ ಹಾಗೂ ನಾನು ಗಸ್ತಿಗೆ ಬಂದೆವು. ನಾವು ಎನ್.ಹೆಚ್-63ರ ಲಗ್ತ ಸಾಗ ಪ್ಲಾಂಟೇಶನ್‌ನಲ್ಲಿ ಒಂದು ಟಿಪ್ಪರ ವಾಹನ ನಿಂತಿರುವುದನ್ನು ನೋಡಿದೆವು. ಆಗ ನಮಗೆ ಅನುಮಾನ ಬಂದು ಪರಿಶೀಲಿಸಲು ಅದರ ಹತ್ತಿರ ನಮ್ಮ ವಾಹನವನ್ನು ತೆಗೆದುಕೊಂಡು ಹೋಗಬೇಕಾದರೆ ನಮ್ಮ ಜೀಪನ್ನು ನೋಡಿ ಆರೋಪಿಗಳು ಓಡಿ ಹೋಗಿರುತ್ತಾರೆ. ನಂತರ ನಾವು ವಾಹನದಿಂದ ಕೆಳಗೆ ಇಳಿದು ಪರಿಶೀಲಿಸಲಾಗಿ ಅದು ಎಂ.ಇ.ಕೆ-4048 ಇದ್ದು ಅದರ ಮೇಲೆ ಸಾಗ ತುಂಡುಗಳನ್ನು ಹೇರಿದ್ದು ಕಂಡು ಬಂದಿತು. ನಾವೆಲ್ಲರೂ ಸೇರಿ ಪರಿಶೀಲಿಸಿದಾಗ ಅದರಲ್ಲಿ ಒಟ್ಟು 21 ಸಾಗ ತುಂಡುಗಳನ್ನು ಹೇರಿತ್ತು. ಟಿಪ್ಪರ ಕೆಳಭಾಗದಲ್ಲಿ 7 ಸಾಗ ತುಂಡುಗಳು ಇದ್ದವು ಹಾಗೂ ಟಿಪ್ಪರಿನ ಮುಂದಿನ ಟಾಯರ್ ನೆಲದಲ್ಲಿ ಹೂತು ಹೋಗಿತ್ತು. ಸದರಿ ಸಾಗ ತುಂಡುಗಳನ್ನು ಪರಿಶೀಲಿಸಲಾಗಿ ಅದಕ್ಕೆ ಯಾವುದೇ ಸರ್ಕಾರದ ಅಧಿಕೃತ ಮುದ್ರೆಗಳು ಇರಲಿಲ್ಲ. ಆಗ ಬೆಳಕು ಆಗಿದ್ದರಿಂದ ನಾವು ಮುಂದೆ ಪ್ಲಾಂಟೇಶನ ಹೋಗಿ ಪರಿಶೀಲಿಸಿದೆವು. ಅಲ್ಲಿ ಸುಮಾರು 10 ಸಾಗ ಮರಗಳನ್ನು ಕಡಿಯಲಾಗಿತ್ತು. ಅದನ್ನು ನೋಡಿ ಸದ್ರಿ ಸಾಗ ಮರಗಳಿಂದಲೇ ಈ ತುಂಡುಗಳನ್ನು ತಯಾರಿಸಿ ಟಿಪ್ಪರನಲ್ಲಿ ಹೇರಿದ್ದು ಖಾತ್ರಿಯಾಗಿತ್ತು. ರಾತ್ರಿಯಾಗಿದ್ದರಿಂದ ಹಾಗೂ ಸ್ಥಳದಲ್ಲಿ ಯಾವುದೇ ಸ್ಥಳೀಕರು ಇಲ್ಲದೇ ಇದ್ದ ಕಾರಣ, ಇಲಾಖಾ ಸಿಬ್ಬಂದಿಗಳನ್ನೇ ಪಂಚರನ್ನಾಗಿ ಮಾಡಿಕೊಂಡು ಪಂಚನಾಮೆಯನ್ನು ಬರೆಯಲಾಗಿತ್ತು. ಟಿಪ್ಪರ ಮೇಲೆ ಹಾಗೂ ಕೆಳಗೆ ಇದ್ದ ಒಟ್ಟು ತುಂಡುಗಳೂ ಸೇರಿ 28 ತುಂಡುಗಳಾಗಿದ್ದು ಅದು ಒಟ್ಟು 2.264 ಘ.ಮೀ. ಇತ್ತು. ಹಾಗೂ ಅದರಲ್ಲಿ ಗಿಡ ಕಡಿಯಲು ಉಪಯೋಗಿಸಿದಂತಹ ಕರಗಸ, ತಾಡಪತ್ರಿ ಇತ್ತು. ಟಿಪ್ಪರನ ಒಳಭಾಗದಲ್ಲಿ ಒಂದು ಲೈಸನ್ಸ್ ಮತ್ತು ನಾಯ್ಕ ಟ್ರಾನ್ಸಪೋರ್ಟ ರಸೀದಿ ಪುಸ್ತಕ ಇತ್ತು. ಎಲ್ಲಾ ವಸ್ತುಗಳಿಗೆ 1 ರಿಂದ 6ನೇ ನಂಬರ ಕೊಡಲಾಯಿತು. ಹಾಗೂ ಮೇಲೆ ಹೇಳಿದ ಸಾಗ ತುಂಡುಗಳನ್ನು ಟಿಪ್ಪರ, ಅಡ್ಡಖರಗಸಗಳನ್ನು, ತಾಡಪತ್ರಿ. ಚಲನ್ ಪುಸ್ತಕ ಹಾಗೂ ಡ್ರೈವರ್ ಲೈಸನ್ಸ್‌ಗಳಿಗೆ ಕ್ರಮವಾಗಿ 1 ರಿಂದ 6 ನಂಬರ ಕೊಟ್ಟು ಪಂಚನಾಮೆ ಬರೆದು ಜಪ್ತಿ ಪಡಿಸಿಕೊಳ್ಳಲಾಯಿತು. ಪಂಚನಾಮೆ ಹಾಗೂ ಅದರಲ್ಲಿದ್ದ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಪಂಚನಾಮೆಯನ್ನು ಈಗಾಗಲೇ ನಿ.ಪಿ.-1 ಎಂದು ಗುರುತಿಸಲಾಗಿದ್ದು, ಸಾಕ್ಷಿ ಸಹಿಯನ್ನು ನಿ.ಪಿ-1ಬಿ ಎಂದು ಗುರುತಿಸಲಾಯಿತು. ಜಪ್ತಿ ಪಡಿಸಿದ ವಾಹನದ ಫೋಟೋವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿಪಿ-2 ಮತ್ತು 3 ಎಂದು ಈಗಾಗಲೇ ಗುರುತಿಸಲಾಗಿದೆ. ನಂತರ ವಲಯ ಕಛೇರಿಗೆ ಹಿಂದಿರುಗಿ ವಿ.ಎಸ್. ನಾಯ್ಕ ಇವರು ಆರೋಪಿತರ ವಿರುದ್ಧ ಪ್ರ.ವಾ ವರದಿಯನ್ನು ದಾಖಲಿಸಿರುತ್ತಾರೆ. ಪಂಚನಾಮೆಯನ್ನು ಬೆಳಗ್ಗಿನ ಜಾವ ಅಂದರೆ 22-09-2004 ರಂದು ಬೆಳಗ್ಗಿನ 6.30 ಘಂಟೆಗೆ ಪ್ರ.ಸ-1 ರವರು ಬರೆದಿರುತ್ತಾರೆ. ಯಾರೂ ಸಾರ್ವಜನಿಕರು ಇಲ್ಲದ ಕಾರಣ ನಾವು ಸಿಬ್ಬಂದಿಗಳು ಪಂಚರಾಗಿ ಸಹಿ ಮಾಡಿರುತ್ತೇವೆ ಎಂದು ಹೇಳಿಕೆ ನೀಡಿರುತ್ತಾರೆ.

**ದಿನಾಂಕ: 13-2-2015 ರಂದು ಪುನಃ ಪ್ರಾ.ಸಾ-2 ರವರನ್ನು ಕರೆಯಿಸಿ ಶ್ರೀ ಡಿ.ಎನ್.ಎನ್. ವಕೀಲರು ಅರ್ಜಿದಾರರ ಪರವಾಗಿ ಪಾಟೀ ಸವಾಲು ಮಾಡಿರುತ್ತಾರೆ.**

ಪ್ರಾ.ಸಾ-2 ರವರು ಪಾಟೀ ಸವಾಲಿಗೆ ಉತ್ತರಿಸುತ್ತಾ ಪ್ರಾ.ಸಾ-1 ಮತ್ತು 3 ನನ್ನ ಮೇಲಾಧಿಕಾರಿಗಳು ಎಂದರೆ ಸರಿ. ನಾವು ಮೇಲಾಧಿಕಾರಿಗಳು ಹೇಳಿದಂತೆ ಕೇಳಬೇಕಾಗುತ್ತದೆ ಎಂದರೆ ಸರಿ. ಗುನ್ನಾ ಸ್ಥಳದಿಂದ ರಾಷ್ಟ್ರೀಯ ಹೆದ್ದಾರಿ ಸುಮಾರು 100 ಮೀಟರ ಅಂತರದಲ್ಲಿ ಇರುತ್ತದೆ. ಪಂಚನಾಮೆಯನ್ನು ಬೆಳಗ್ಗೆ 6.30 ಘಂಟೆಯಿಂದ 7.30 ಘಂಟೆಯ ಅವಧಿಯಲ್ಲಿ ಬರೆಯಲಾಗಿರುತ್ತದೆ. ರಾಷ್ಟ್ರೀಯ ಹೆದ್ದಾರಿಯಲ್ಲಿ ವಾಹನಗಳು ಸಾಮಾನ್ಯವಾಗಿ ಓಡಾಡುತ್ತಾ ಇರುತ್ತವೆ ಎಂದರೆ ಸರಿ. ಗುನ್ನೆ ನಡೆದ ಸ್ಥಳದಿಂದ ಸುಮಾರು 400 ಮೀಟರ್ ಅಂತರದಲ್ಲಿ ಒಂದು ಹೋಟೆಲ್ ಇದೆ. ನಾವು ಪಂಚನಾಮೆ ಮಾಡುವ ಕಾಲಕ್ಕೆ ರಾಷ್ಟ್ರೀಯ ಹೆದ್ದಾರಿಯಲ್ಲಿ ಜನರು ಹಾಗೂ ವಾಹನಗಳು ಓಡಾಡುತ್ತಾ ಇದ್ದವು ಎಂದರೆ ಸರಿ. ಓಡಿ ಹೋದ ಆರೋಪಿತರು ಯಾರು ಎನ್ನುವುದನ್ನು ನಾನು ನೋಡಿಲ್ಲ. ನಾನು ಗುನ್ನೆ ನಡೆದ ದಿನದಂದು ಗುನ್ನಾ ಸ್ಥಳದಲ್ಲಿ ಹಾಜರು ಇರಲಿಲ್ಲ ನನ್ನ ಸಮಕ್ಷಮ ನಿ.ಪಿ.-1 ರಂತೆ ಪಂಚನಾಮೆ ಮಾಡಿ ವಾಹನವನ್ನು ಜಪ್ತಿಪಡಿಸಿಕೊಂಡಿಲ್ಲ ಹಾಗೂ ಸ್ಥಳದಲ್ಲಿಯೇ ನಾನು ನಿ.ಪಿ-1ಕ್ಕೆ ಸಹಿ ಮಾಡಿಲ್ಲ ಎಂದರೆ ಸರಿಯಲ್ಲ. ನಿ.ಪಿ.-1 ಎಂದು ಪಂಚನಾಮೆಯನ್ನು ಪ್ರಾಸಾ-1 ರವರು ಬರೆದಿರುತ್ತಾರೆ. ನನ್ನ ಇಲಾಖೆಯ ಹಿರಿಯ ಅಧಿಕಾರಿಗಳ ಮಾತು ಕೇಳಿ ನಾನು ಸುಳ್ಳು ಸಾಕ್ಷಿಯನ್ನು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಇಲಾಖೆಯ ಅಧಿಕಾರಿಗಳು ನನ್ನ ಸಮಕ್ಷಮ ವಾಹನವನ್ನು ಜಪ್ತುಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ನನ್ನ ಇಲಾಖೆಯ ಅಧಿಕಾರಿಗಳು ತಾವು ಕರ್ತವ್ಯವನ್ನು

ನಿರ್ವಹಿಸುತ್ತಿರುವ ಬಗ್ಗೆ ಹಾಗೂ ಅಂಕಿಅಂಶಕ್ಕೊಸ್ಕರ ದಾಖಲಿಸಿದ ಸುಳ್ಳು ಪ್ರಕರಣಕ್ಕೆ ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಜಪ್ತ ಪಡಿಸಿಕೊಂಡ ವಾಹನಕ್ಕೂ ಹಾಗೂ ಸಾಗ ತುಂಡುಗಳಿಗೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ. ನಮ್ಮಿಂದ 10–15 ಮೀಟರ್ ಅಂತರದಲ್ಲಿ ಆರೋಪಿತರು ಓಡಿ ಹೋಗಿರುತ್ತಾರೆ. ನಾವು ಹಿಡಿಯಲು ಪ್ರಯತ್ನಪಟ್ಟಿಲ್ಲ. ಆದರೆ ಅವರು ಓಡಿ ಹೋಗಿರುತ್ತಾರೆ. ನಾನು ಮುಖ್ಯ ವಿಚಾರಣೆಯಲ್ಲಿ ಹೇಳಿದ ಸಂಗತಿಗಳು ಸುಳ್ಳು ಎಂದರೆ ಸರಿಯಲ್ಲ ಎಂದು ಹೇಳಿರುತ್ತಾರೆ.

**ಪಿಡಬ್ಲು–3** ಶ್ರೀ ಈಶ್ವರ ತುಕ್ಕಪ್ಪ ನಾಯ್ಕ, ಸಾ: ಬೊಬ್ರವಾಡಾ ಇವರು ತಮ್ಮ ಸಾಕ್ಷ್ಯದಲ್ಲಿ ನಾನು 2004ನೇ ಸಾಲಿನಲ್ಲಿ ಕಾಮಗಾರಿ ವನಪಾಲಕ ಎಂತಾ ಮಾಸ್ತಿಕಟ್ಟಾದಲ್ಲಿ ಕೆಲಸ ಮಾಡುತ್ತಿದ್ದೆ. ಪ್ರಾ.ಸಾ–1 ರವರು ಸಹ ಕಾಮಗಾರಿ ವನಪಾಲಕ ಮಾಸ್ತಿಕಟ್ಟಾ ಎಂದು ಕೆಲಸ ಮಾಡುತ್ತಿದ್ದರು. ಹಾಗೂ ಶ್ರೀ ವಿ.ಎಸ್. ನಾಯ್ಕ ರವರು ಪ್ರಭಾರಿ ಸುಂಕಸಾಳ ಶಾಖೆಯ ವನಪಾಲಕರಾಗಿ ಕೆಲಸ ಮಾಡುತ್ತಿದ್ದರು. ಅವರು ಈಗ ನಿವೃತ್ತಿ ಹೊಂದಿದ್ದು ಅನಾರೋಗ್ಯದಿಂದ ಬಳಲುತ್ತಿದ್ದಾರೆ. ಹಾಗೂ ನ್ಯಾಯಾಲಯಕ್ಕೆ ಬಂದು ಸಾಕ್ಷಿ ಹೇಳುವ ಸ್ಥಿತಿಯಲ್ಲಿ ಇರುವುದಿಲ್ಲ.

ದಿನಾಂಕ: 21–09–2004 ರಂದು ರಾತ್ರಿ 12.00 ಘಂಟೆಗೆ ಗಸ್ತು ನಿಯೋಜಿಸಿದ ಸಿಬ್ಬಂದಿಗಳು ಇಲಾಖಾ ವಾಹನದ ಮೇಲೆ ಸುಂಕಸಾಳದ ಸಿಬ್ಬಂದಿಗಳನ್ನು ಕರೆದುಕೊಂಡು ಹೊಸಕಂಬಿ ಮಾಸ್ತಿಕಟ್ಟಾ ಮಾರ್ಗವಾಗಿ ಗಸ್ತು ತಿರುಗುತ್ತಾ 2 ನೇ ಸುತ್ತಿನಲ್ಲಿ ಬೆಳಗಿನ 4.00 ಘಂಟೆಯ ಸಮಯಕ್ಕೆ ಕೆಲವು ಸೂಕ್ಷ್ಮ ಪ್ರದೇಶಗಳಾದ ಬಡಿಗೋಣ ಪ್ಲಾಂಟೇಶನ ಹೆಬ್ಬುಳ ಮಾರ್ಗವಾಗಿ ಬಾಕ್ಸ್ ಕಟಿಂಗ್ ಪ್ಲಾಂಟೇಶನ್ ಪರಿಶೀಲಿಸುತ್ತ ಬಂದೆವು. ಈ ರೀತಿ ಕುಸ್ಲಪ್ಪ ಎಲ್. ನಾಯ್ಕ, ವಿ.ಎಸ್. ನಾಯ್ಕ, ಬಾನು ಪೊಕ್ಕಾ ಗೌಡ, ಸುರೇಶ ಪಡ್ತಿ ಹಾಗೂ ನಾನು ಗಸ್ತಿಗೆ ಬಂದೆವು. ನಾವು ಎನ್. ಹೆಚ್–63 ರ ಲಗ್ತ ಬ್ಲಾಕ್ ನಂ. 24–16 ಫಾ.ಸ.ನಂ. 86 ರ ಸಾಗ ಪ್ಲಾಂಟೇಶನ್‌ನಲ್ಲಿ ಒಂದು ಟಿಪ್ಪರ ವಾಹನ ನಿಂತಿರುವುದನ್ನು ನೋಡಿದೆವು. ಆಗ ನಮಗೆ ಅನುಮಾನ ಬಂದು ಪರಿಶೀಲಿಸಲು ಅದರ ಹತ್ತಿರ ನಮ್ಮ ವಾಹನವನ್ನು ತೆಗೆದುಕೊಂಡು ಹೋಗಬೇಕಾದರೆ ನಮ್ಮ ಜೀಪನ್ನು ನೋಡಿ ಆರೋಪಿಗಳು ಓಡಿ ಹೋಗಿರುತ್ತಾರೆ. ನಂತರ ನಾವು ವಾಹನದಿಂದ ಕೆಳಗೆ ಇಳಿದು ಪರಿಶೀಲಿಸಲಾಗಿ ಅದು ಎಂ.ಇ.ಕೆ–4048 ಇದ್ದು ಅದರ ಮೇಲೆ ಸಾಗ ತುಂಡುಗಳನ್ನು ಹೇರಿದ್ದು ಕಂಡು ಬಂದಿತು. ನಾವೆಲ್ಲರೂ ಸೇರಿ ಪರಿಶೀಲಿಸಿದಾಗ ಅದರಲ್ಲಿ ಒಟ್ಟು 21 ಸಾಗ ತುಂಡುಗಳನ್ನು ಹೇರಿತ್ತು ಟಿಪ್ಪರ ಕೆಳಭಾಗದಲ್ಲಿ 7 ಸಾಗ ತುಂಡುಗಳು ಇದ್ದವು ಹಾಗೂ ಟಿಪ್ಪರಿನ ಮುಂದಿನ ಟಾಯರ್ ನೆಲದಲ್ಲಿ ಹೂತು ಹೋಗಿತ್ತು. ಸದರಿ ಸಾಗ ತುಂಡುಗಳನ್ನು ಪರಿಶೀಲಿಸಲಾಗಿ ಅದಕ್ಕೆ ಯಾವುದೇ ಸರ್ಕಾರದ ಅಧಿಕೃತ ಮುದ್ರೆಗಳು ಇರಲಿಲ್ಲ. ಆಗ ಬೆಳಕು ಆಗಿದ್ದರಿಂದ ನಾವು ಮುಂದೆ ಪ್ಲಾಂಟೇಶನ ಹೋಗಿ ಪರಿಶೀಲಿಸಿದೆವು. ಅಲ್ಲಿ ಸುಮಾರು 10 ಸಾಗ ಮರಗಳನ್ನು ಕಡಿಯಲಾಗಿತ್ತು. ಅದನ್ನು ನೋಡಿ ಸದ್ರಿ ಸಾಗ ಮರಗಳಿಂದಲೇ ಈ ತುಂಡುಗಳನ್ನು ತಯಾರಿಸಿ ಟಿಪ್ಪರಿನಲ್ಲಿ ಹೇರಿದ್ದು ಖಾತ್ರಿಯಾಗಿತ್ತು. ರಾತ್ರಿಯಾಗಿದ್ದರಿಂದ ಹಾಗೂ ಸ್ಥಳದಲ್ಲಿ ಯಾವುದೇ ಸ್ಥಳೀಕರು ಇಲ್ಲದೇ ಇದ್ದ ಕಾರಣ, ಇಲಾಖಾ ಸಿಬ್ಬಂದಿಗಳನ್ನೇ ಪಂಚರನ್ನಾಗಿ ಮಾಡಿಕೊಂಡು ಪಂಚನಾಮೆಯನ್ನು ಬರೆಯಲಾಗಿತ್ತು. ಟಿಪ್ಪರ ಮೇಲೆ ಹಾಗೂ ಕೆಳಗೆ ಇದ್ದ ಒಟ್ಟು ತುಂಡುಗಳು ಸೇರಿ 28 ತುಂಡುಗಳಾಗಿದ್ದು ಅದು ಒಟ್ಟು 2.264 ಘ,ಮೀ. ಇತ್ತು. ಹಾಗೂ ಅದರಲ್ಲಿ ಗಿಡ ಕಡಿಯಲು ಉಪಯೋಗಿಸಿದಂತಹ ಕರಗಸ, ತಾಡಪತ್ರಿ ಇತ್ತು. ಟಿಪ್ಪರಿನ ಒಳಭಾಗದಲ್ಲಿ ಒಂದು ಲೈಸನ್ಸ್ ಮತ್ತು ನಾಯ್ಕ ಟ್ರಾನ್ಸಪೋರ್ಟ ರಸೀದಿ ಪುಸ್ತಕ ಇತ್ತು. ಎಲ್ಲಾ ವಸ್ತುಗಳಿಗೆ 1 ರಿಂದ 6ನೇ ನಂಬರ ಕೊಡಲಾಯಿತು. ಹಾಗೂ ಮೇಲೆ ಹೇಳಿದ ಸಾಗ ತುಂಡುಗಳನ್ನು, ಟಿಪ್ಪರ, ಅಡ್ಡಕರಗಸಗಳನ್ನು, ತಾಡಪತ್ರಿ, ಚಲನ್ ಪುಸ್ತಕ ಹಾಗೂ ಡ್ರೈವರ್ ಲೈಸನ್ಸ್‌ಗಳಿಗೆ ಕ್ರಮವಾಗಿ 1ರಿಂದ 6 ನಂಬರ ಕೊಟ್ಟು ಪಂಚನಾಮೆ ಬರೆದು ಜಪ್ತಿ ಪಡಿಸಿಕೊಳ್ಳಲಾಯಿತು. ಪಂಚನಾಮೆ ಹಾಗೂ ಅದರಲ್ಲಿದ್ದ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಪಂಚನಾಮೆಯನ್ನು ಈಗಾಗಲೇ ನಿ.ಪಿ.–1 ಎಂದು ಗುರುತಿಸಲಾಗಿದ್ದು, ಸಾಕ್ಷಿ ಸಹಿಯನ್ನು ನಿ.ಪಿ–1ಸಿ ಎಂದು ಗುರುತಿಸಲಾಯಿತು. ಜಪ್ತಿ ಪಡಿಸಿದ ವಾಹನದ ಫೋಟೋವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–2 ಮತ್ತು 3 ಎಂದು ಈಗಾಗಲೇ ಗುರುತಿಸಲಾಗಿದೆ. ನಂತರ ವಲಯ ಕಛೇರಿಗೆ ಹಿಂದಿರುಗಿ ವಿ.ಎಸ್. ನಾಯ್ಕ ಇವರು ಆರೋಪಿತರ ವಿರುದ್ಧ ಪ್ರ.ವಾ ವರದಿಯನ್ನು ದಾಖಲಿಸಿರುತ್ತಾರೆ. ಪಂಚನಾಮೆಯನ್ನು ಬೆಳಗ್ಗಿನ ಜಾವ ಅಂದರೆ 22–09–2004 ರಂದು ಬೆಳಗ್ಗಿನ 6.30 ಘಂಟೆಗೆ ಪ್ರಾ.ಸಾ–1 ರವರು ಬರೆದಿರುತ್ತಾರೆ. ಯಾರೂ ಸಾರ್ವಜನಿಕರು ಇಲ್ಲದ ಕಾರಣ ನಾವು ಸಿಬ್ಬಂದಿಗಳು ಪಂಚರಾಗಿ ಸಹಿ ಮಾಡಿರುತ್ತೇವೆ. ಮೇಲ್ಕಂಡ ವಾಹನವನ್ನು ಅನಧಿಕೃತವಾಗಿ ಸರ್ಕಾರಕ್ಕೆ ಸೇರಿದ ಸಾಗ ತುಂಡುಗಳನ್ನು ಸಾಗಾಟ ಮಾಡಲು ಪ್ರಯತ್ನಿಸಿದ್ದು, ಸದರಿ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಅರಿಕೆ ಇದೆ. ಎಂದು ಹೇಳಿಕೆ ನೀಡಿರುತ್ತಾರೆ.

**ದಿನಾಂಕ: 13–2–2015 ರಂದು ಪುನಃ ಪ್ರಾ.ಸಾ–2 ರವರನ್ನು ಕರೆಯಿಸಿ ಶ್ರೀ ಡಿ.ಎನ್.ಎನ್. ವಕೀಲರು ಅರ್ಜಿದಾರರ ಪರವಾಗಿ ಪಾಟೀ ಸವಾಲು ಮಾಡಿರುತ್ತಾರೆ.**

ಪ್ರಾ.ಸಾ–3 ರವರು ಪಾಟೀ ಸವಾಲಿಗೆ ಉತ್ತರಿಸುತ್ತಾ ಪ್ರಾ.ಸಾ–1 ಇವರು ನನ್ನ ಮೇಲಾಧಿಕಾರಿಗಳು ಅಲ್ಲ ನನ್ನ ಸಹದ್ಯೋಗಿಗಳು ಆಗಿರುತ್ತಾರೆ. ವಲಯ ಅರಣ್ಯಾಧಿಕಾರಿಗಳು ನಮಗೆ ಮೇಲಾಧಿಕಾರಿಗಳಾಗಿರುತ್ತಾರೆ. ನಮ್ಮ ಜೀಪಿನ ಬೆಳಕನ್ನು ನೋಡಿಕೊಂಡು ಆರೋಪಿತರು ಓಡಿ ಹೋಗಿದ್ದು ಅವರು ಹಾಗೆ ಸುಮಾರು 30 ಮೀಟರ್ ಅಂತರದಲ್ಲಿ ಓಡಿ ಹೋಗಿರುತ್ತಾರೆ. ನಾನು ಆರೋಪಿತರನ್ನು ನೋಡಿಲ್ಲ. ಗುನ್ಹೆ ನಡೆದ ಸ್ಥಳದಿಂದ ರಾಷ್ಟ್ರೀಯ ಹೆದ್ದಾರಿ ಸುಮಾರು 100 ಮೀಟರ್ ಅಂತರದಲ್ಲಿ ಇರುತ್ತದೆ. ಪಂಚನಾಮೆಯ ಕಾಲಕ್ಕೆ ಅಲ್ಲಿ ಯಾವುದೇ ವಾಹನದ ಓಡಾಟ ಇರಲಿಲ್ಲ. ಈ ಪ್ರಕರಣದ ಎಲ್ಲಾ ಸಾಕ್ಷಿದಾರರು ಇಲಾಖಾ ಸಾಕ್ಷಿದಾರರು ಎಂದರೆ ಸರಿ. ಪ್ರಕರಣದ ಎಲ್ಲಾ ಸಾಕ್ಷಿದಾರರು ಇಲಾಖಾ ಸಾಕ್ಷಿಗಳಾಗಿದ್ದು ನಾವು ಈ ಪ್ರಕರಣವನ್ನು ಸೃಷ್ಟಣೆ ಮಾಡಿಕೊಂಡಿರುವುದರಿಂದ ಯಾವುದೇ ಸ್ವತಂತ್ರ ಸಾಕ್ಷಿದಾರರು ಇಲ್ಲವೆಂದು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಸದರಿ ದಿನದಂದು ನಾನು ಯಾವುದೇ ಗಸ್ತು ಕರ್ತವ್ಯಕ್ಕೆ ಹೋಗಿರಲಿಲ್ಲ ಎಂದರೆ ಸರಿಯಲ್ಲ. ನನ್ನ ಸಮಕ್ಷಮ ನಿ.ಪಿ–1 ರಂತೆ ಪಂಚನಾಮೆ ಮಾಡಿ ವಾಹನ ಸಂಖ್ಯೆ: ಎಂಇಕೆ–4048ನ್ನು ಜಪ್ತಿಪಡಿಸಿಕೊಂಡಿಲ್ಲ ಹಾಗೂ ಸಾಗ ತುಂಡುಗಳನ್ನು ಜಪ್ತಿಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ನಾನು ಸ್ಥಳದಲ್ಲಿಯೇ ನಿ.ಪಿ–1ಕ್ಕೆ ಸಹಿ ಹಾಕಿಲ್ಲಾ ಎಂದರೆ ಸರಿಯಲ್ಲ. ಸರ್ವೆ ನಂಬರ 86 ರಲ್ಲಿ ಮಾಲ್ಕಿ ಜಮೀನುಗಳು ಬರುತ್ತವೆ ಎಂದರೆ ಸರಿಯಲ್ಲ. ನಾನು ಕೇವಲ ಸಾಗವಾನಿ ನೆಡುತೋಪು ಇದೆ ಎಂದು ಪ್ರಕರಣಕ್ಕೆ ಅನುಕೂಲವಾಗಲಿ ಎಂದು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಸರ್ವೆ ನಂಬರ 86ಕ್ಕೆ ಸಂಬಂಧಿಸಿದಂತೆ ಪಹಣಿ ಮತ್ತು ನಕಾಶೆಯನ್ನು ನನ್ನ ಮೇಲಾಧಿಕಾರಿಗಳು ಹಾಜರುಪಡಿಸಿದ್ದಾರೆ. ಅವರು ಹಾಜರುಪಡಿಸಿದ್ದಾರೆ ಎಂದು ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ನಮ್ಮ ಕರ್ತವ್ಯ ಲೋಪದಿಂದ ಅರಣ್ಯ ಮರಗಳು ಕಳ್ಳ ಸಾಗಾಣಿಕೆಯಾಗುತ್ತಿದೆ ಎಂದು ದಿನಪತ್ರಿಕೆಯಲ್ಲಿ ಬರುತ್ತಿತ್ತು ಎಂದರೆ ಸರಿಯಲ್ಲ. ಅದಕ್ಕೆ ನಾವು ಈ ವಿಷಯಕ್ಕೆ ಸಂಬಂಧಿಸಿದಂತೆ ಕಾರ್ಯತತ್ಪರರಾಗಿದ್ದೇವೆ ಎಂದು ಸಾಧನೆ ಮಾಡಲು ಸುಳ್ಳು ಪ್ರಕರಣ ದಾಖಲಿಸಿಕೊಂಡಿದ್ದೇವೆ ಎಂದರೆ ಸರಿಯಲ್ಲ. ನಾನು ಮುಖ್ಯ ವಿಚಾರಣೆಯಲ್ಲ ಹೇಳಿದಂತಹ ಯಾವತ್ತೂ ವಿಷಯಗಳು ಸುಳ್ಳು ಎಂದರೆ ಸರಿಯಲ್ಲ. ಜಪ್ತಿಪಡಿಸಿದ ಸಾಗ ತುಂಡುಗಳಿಗೂ ಹಾಗೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ. ಪ್ರ.ವ.ವರದಿಯನ್ನು ನಾವು ಸ್ಥಳದಲ್ಲಿಯೇ ದಾಖಲಿಸಿದ್ದೇವೆ. ಕಛೇರಿಯಲ್ಲಿ ಇದ್ದಂತಹ ಸಾಗ ತುಂಡುಗಳನ್ನು ನಮೂದಿಸಿಕೊಂಡು ನಾವು ಸುಳ್ಳು ಪ್ರಕರಣದ ದಾಖಲಿಸಿಕೊಂಡಿದ್ದೇವೆ ಎಂದರೆ ಸರಿಯಲ್ಲ. ಈ ಪ್ರಕರಣಕ್ಕೂ ಹಾಗೂ ಈ ವಾಹನಕ್ಕೂ ಯಾವುದೇ ಸಂಬಂಧಿವಿಲ್ಲ ಎಂದರೆ ಸರಿಯಲ್ಲ ಎಂದು ಉತ್ತರಿಸಿರುತ್ತಾರೆ.

**ಪಿಡಬ್ಲ್ಯು–4** ಶ್ರೀ ಕೆ.ಜಿ. ಪ್ರಕಾಶ, ವಲಯ ಅರಣ್ಯಾಧಿಕಾರಿ ಇವರು ತಮ್ಮ ಸಾಕ್ಷ್ಯದಲ್ಲಿ ನಾನು ದಿನಾಂಕ: 25–06–2003 ರಿಂದ 29–05–2006 ರ ಮೇರೆಗೆ ವಲಯ ಅರಣ್ಯಾಧಿಕಾರಿ ಮಾಸ್ತಿಕಟ್ಟಾ ವಲಯದಲ್ಲಿ ವಲಯ ಅರಣ್ಯಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದ್ದೇನೆ. ಪ್ರ.ವಾ ವರದಿ ಸಂಖ್ಯೆ: 6/2004–05 ರಂತೆ ಸುಂಕಸಾಳ ಸರ್ವೆ ನಂಬರ 86 ರಲ್ಲಿ ವಾಹನ ಸಂಖ್ಯೆ: ಎಂಇಕೆ–4048 ಪ್ರವೇಶಿಸಿ 10 ಸಾಗಜಾತಿಯ ಮರಗಳನ್ನು ಕಡಿದು 28 ಸಾಗವಾನಿ ತುಂಡುಗಳನ್ನು ಅನಧಿಕೃತವಾಗಿ ಸಾಗಾಣಿಕೆ ಮಾಡುವ ಪ್ರಯುಕ್ತ ದಾಖಲಿಸಿದ ಮೊಕದ್ದಮೆಯ ಮಹಜರನೊಂದಿಗೆ ವಾಹನವನ್ನು ಸಾಗವಾನಿ ತುಂಡು ಮತ್ತು ಅಡ್ಡ ಖರಗಸ–4 ಪ್ಲಾಸ್ಟಿಕ ತಾಡಪಾತ್ರೆ–1, ಗಾಡಿಯಲ್ಲಿದ್ದ ಡೆಲಿವರಿ ನೋಟ ಪುಸ್ತಕ–1, ಡ್ರೈವಿಂಗ್ ಲೈಸನ್ಸ್ ಪುಸ್ತಕ ಝೆರಾಕ್ಸ್ ಪ್ರತಿಯನ್ನು ನನ್ನ ಎದುರಿಗೆ ಹಾಜರುಪಡಿಸಿದರು. ಸದರಿ ಮೊಕದ್ದಮೆಯ ಮಹಜರನ್ನು ಪರಿಶೀಲನೆ ಮಾಡಿ ಮಹಜರಿನಲ್ಲಿ ಹೇಳಿದಂತಹ ಚಹರೆಗೂ ಮತ್ತು ಸಾಗವಾನಿ ತುಂಡುಗಳಿಗೂ ಜಪ್ತಿಪಡಿಸಿದ ಸಾಮಗ್ರಿಗಳಿಗೂ ತಾಳೆ ಇದ್ದುದರಿಂದ ಈ ಪ್ರಕರಣವನ್ನು ವಲಯ ಅರಣ್ಯಾಧಿಕಾರಿಗಳ ಗುನ್ನೆ ರಿಜಿಸ್ಟರ್‌ನಲ್ಲಿ ನಮೂದು ಮಾಡಿಕೊಂಡು ಅದಕ್ಕೆ ಆರ್ ಓಆರ್‌ನಂ. 9/2004–05 ಎಂದು ನಮೂದಿಸಲಾಯಿತು. ನಂತರ ಸದರಿ ಎಂ.ಇ.ಕೆ–4048 ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ 71ಎ ಪ್ರಕಾರ ವಾಹನವನ್ನು ಹಾಗೂ ಜಪ್ತಿಪಡಿಸಿದ ಮ್ಹಾಲನ್ನು ಅಧಿಕಾರಿಯುತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ರವರ ಸಮ್ಮುಖದಲ್ಲಿ ಹಾಜರುಪಡಿಸಲಾಯಿತು. ನಂತರ ಸದರಿ ವಾಹನದ ಮಾಲೀಕರು ಯಾರು ಎನ್ನುವ ಬಗ್ಗೆ ಸಾರಿಗೆ ಅಧಿಕಾರಿಗಳಿಂದ ಮಾಹಿತಿ ಪಡೆಯಲಾಯಿತು. ಸದರಿ ವಾಹನದ ಮಾಲೀಕರು ಶ್ರೀಮತಿ ಆಶಾ ಗಜಾನನ ನಾಯ್ಕ, ಅಂಕೋಲಾ ರವರು ಆಗಿದ್ದು, ಸದರಿ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದರಿಂದ ಅರಣ್ಯ ಕಾಯಿದೆ ಸೆಕ್ಷನ್ 71ಎ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಸ್ತಾವನೆಯನ್ನು ಸಲ್ಲಿಸಲಾಯಿತು.

ಅಮಾನತ್ತು ವರದಿಯನ್ನು ಹಾಜರುಪಡಿಸುತ್ತಿದ್ದು ಅದನ್ನು ಈಗಾಗಲೇ ನಿ.ಪಿ–6 ಎಂದು ಗುರುತಿಸಲಾಗಿದೆ. ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿ.ಪಿ.–6ಎ ಎಂದು ಗುರುತಿಸಲಾಯಿತು. ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರು ನೀಡಿದ ವಾಹನ ಒಡೆತನದ ಪತ್ರವನ್ನು ಹಾಜರುಪಡಿಸಿದ್ದು ಅದನ್ನು ನಿ.ಪಿ–7 ಎಂದು ಗುರುತಿಸಲಾಯಿತು.

ಸದರಿ ವಾಹನವು ಅರಣ್ಯ ಉತ್ಪನ್ನದ ಕಳ್ಳ ಸಾಗಾಣಿಕೆಯಲ್ಲಿ ಬಳಕೆಯಾದ ಸದರಿ ವಾಹನ ಮತ್ತು ಇತರ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ನ್ಯಾಯಾಲಯದಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ಸದರಿ ಲಾರಿಯನ್ನು ಮತ್ತು ಅದರೊಂದಿಗೆ ಜಪ್ತಿಪಡಿಸಿದ ಇತರ ಸೊತ್ತುಗಳನ್ನು ನೋಡಿದ್ದಲ್ಲಿ ನಾನು ಗುರುತಿಸುತ್ತೇನೆ. ಲಾರಿಯ ಭಾವಚಿತ್ರವನ್ನು ನೋಡಿದ್ದಲ್ಲಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ಎಂದು ಹೇಳಿಕೆ ನೀಡಿರುತ್ತಾರೆ.

**ಪಾಟೀ ಸವಾಲು ಶ್ರೀ ಡಿ.ಎನ್. ನಾಯಕ ವಕೀಲರಿಂದ :**

ಪ್ರಾ.ಸಾ–4 ರವರು ಪಾಟೀ ಸವಾಲಿನಲ್ಲಿ ಸದರಿ ವಾಹನದ ಆರ್.ಸಿ. ಪುಸ್ತಕವನ್ನು ನಾನು ವಶಪಡಿಸಿಕೊಂಡಿದ್ದು ಇರುವುದಿಲ್ಲ. ಆರ್.ಸಿ. ಪುಸ್ತಕ ಕೇಳಿ ಪಡೆಯಲು ನನಗೆ ಯಾವುದೇ ತೊಂದರೆ ಇರಲಿಲ್ಲ. ಆರ್.ಸಿ. ಪುಸ್ತಕದ ಪ್ರತಿಯನ್ನು ಪಡೆದಿರುವುದಿಲ್ಲ. ಆರ್.ಸಿ. ಮಾಲೀಕರ ಬಗ್ಗೆ ಮಾಹಿತಿಯನ್ನು ಈಗ ಪಡೆದು ಹಾಜರುಪಡಿಸಿದ್ದೇನೆ. ಎಂದರೆ ಸರಿಯಲ್ಲ. ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸುವ ಸಂದರ್ಭದಲ್ಲಿ ಶ್ರೀಮತಿ ಆಶಾ ಗಜಾನನ ನಾಯ್ಕ ಇವರು ವಾಹನದ ಮಾಲೀಕಳು ಎನ್ನುವ ಬಗ್ಗೆ ಆರ್.ಸಿ. ಪುಸ್ತಕವನ್ನು ಪಡೆದುಕೊಂಡಿರುವುದಿಲ್ಲ ಎಂದರೆ ಸರಿ. ಗುನ್ನೆ ನಡೆದ ಸ್ಥಳದ ನಕಾಶೆಯನ್ನು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ನನ್ನ ಪ್ರಕಾರ ಗುನ್ಹಾ ಸ್ಥಳವು ಸುಂಕಸಾಳ ಅರಣ್ಯ ಸರ್ವೆ ನಂಬರ 86 ಆಗಿರುತ್ತದೆ. ನಕಾಶೆ ಕೊಟ್ಟಿರುತ್ತೇನೆ. ಅದರಲ್ಲಿ ಸುಂಕಸಾಳ ಗ್ರಾಮದ ನಕಾಶೆ ಎಂದು ನಮೂದಿಸಿಲ್ಲ. ಘಟನೆ ನಡೆದ ಸ್ಥಳಕ್ಕೂ ಮತ್ತು ಈ ಗುನ್ನೆಗೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ. ನಕಾಶೆಯಲ್ಲಿ ಯಾವ ಗ್ರಾಮಕ್ಕೆ ಸಂಬಂಧಿಸಿದ್ದು ಎಂದು ನಮೂದು ಇರುತ್ತದೆ. ಸಾಕ್ಷಿ ಸ್ವತಃ ನೋಡಿರುತ್ತಾರೆ. ನಕಾಶೆ ದೊಡ್ಡದಿರುವುದರಿಂದ ಗ್ರಾಮದ ಹೆಸರು ಬಂದಿರುವುದಿಲ್ಲ. ಗ್ರಾಮ ನಕ್ಷೆಯನ್ನು ಚಿಕ್ಕದಾಗಿ ಮಾಡಿ ಆ ಗ್ರಾಮದ ಹೆಸರು ಬರುವ ಹಾಗೆ ಮಾಡಬಹುದಿತ್ತು ಆದರೆ ಅದು ಸರಿಯಾದ ಕ್ರಮವಲ್ಲ. ಏಕೆಂದರೆ ಯಾವುದೇ ನಕ್ಷೆಯನ್ನು ಚಿಕ್ಕದಾಗಿ ಮತ್ತು ದೊಡ್ಡದಾಗಿ ಮಾಡುವುದು ಸರಿಯಾದ ಕ್ರಮವಲ್ಲ. ಉದ್ದೇಶಪೂರ್ವಕವಾಗಿ ಪ್ರಕರಣವನ್ನು ದಾಖಲಿಸಲು ಬೇರೆ ನಕಾಶೆಯನ್ನು ಗುನ್ನೆ ಸಂಬಂಧಿಸಿದ ನಕಾಶೆ ಎಂದು ಹಾಜರುಪಡಿಸಿದ್ದೇನೆ ಎಂದರೆ ಸರಿಯಲ್ಲ. ಗುನ್ನೆ ನಡೆದ ಸ್ಥಳ ಸರ್ವೆ ನಂಬರ 86ರಲ್ಲಿ ಜನವಸತಿ ಮತ್ತು ಮನೆಗಳು ಇವೆ ಎಂದರೆ ಸರಿ. ಪಹಣಿ ಪತ್ರಿಕೆ ಸರ್ವೆ ನಂಬರ 86ರ ಪಹಣಿ ಪತ್ರಿಕೆ ಅರಣ್ಯ ಇಲಾಖೆಗೆ ಸಂಬಂಧಿಸಿದ್ದು ಎಂದು ನಮೂದಿಸಿಲ್ಲಾ ಎಂದರೆ ಸರಿಯಲ್ಲ. ಸರ್ವೆ ನಂಬರ 86 ಇದು ಎನ್.ಹೆಚ್–63ಗೆ ಹೊಂದಿಕೊಂಡು ಇದೆ ಎಂದರೆ ಸರಿ. ರಸ್ತೆ ಎಂದರೆ ರಾತ್ರಿ ಕಾಲದಲ್ಲಿ ವಾಹನಗಳು ಓಡಾಡುತ್ತವೆ ಎಂದರೆ ಸರಿ ಬೆಳಗಿನ ಜಾವ ಜನರು ಓಡಾಡುತ್ತಾರೆ ಎಂದರೆ ಸರಿಯಲ್ಲ. ಈ ಗುನ್ನೆ ವಿಚಾರವಾಗಿ ಸ್ವತಂತ್ರ ಪಂಚರನ್ನು ಮತ್ತು ಸಾಕ್ಷಿದಾರರನ್ನು ತೆಗೆದುಕೊಂಡಿಲ್ಲ. ಎಂದರೆ ಸರಿಯಲ್ಲ. ಪ್ರಕರಣಕ್ಕೆ ಸಂಬಂಧಿಸಿದಂತೆ ಸುಳ್ಳು ದೋಷಾರೋಪಣಾ ಪಟ್ಟಿ ಹಾಜರುಪಡಿಸಿರುತ್ತೇನೆ ಎಂದರೆ ಸರಿಯಲ್ಲ. ಗುನ್ನೆಗೆ ಸಂಬಂಧಿಸಿದ ಫೋಟೋಗಳನ್ನು ಸೃಷ್ಟಿ ಮಾಡಿ ಸಲ್ಲಿಸಿರುವುದು ಅಂದರೆ ಸರಿಯಲ್ಲ. ವಾಹನವನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ ಎಂದರೆ ಸರಿಯಲ್ಲ. ಹೇಳಿಕೆಯನ್ನು ಪ್ರಕರಣಕ್ಕಾಗಿ ಸೃಷ್ಟಿಸಿದ್ದೇನೆ ಎಂದರೆ ಸರಿಯಲ್ಲ. ಯಾವುದೇ ವಾಹನವನ್ನು ವಶಪಡಿಸಿಕೊಂಡಿಲ್ಲವೆಂಬುದು ಸರಿಯಲ್ಲ. ಘಟನಾ ಸ್ಥಳದಲ್ಲಿ ಯಾವುದೇ ವಾಹನವನ್ನು ವಶಪಡಿಸಿಕೊಂಡಿಲ್ಲವೆಂಬುದು ಸರಿಯಲ್ಲ. ದಿನಪತ್ರಿಕೆಗಳಲ್ಲಿ ಅರಣ್ಯದಲ್ಲಿ ಕಳ್ಳ ಸಾಗಾಣಿಕೆ ಆಗುತ್ತಿರುವ ಬಗ್ಗೆ ಸುಳ್ಳು ಪ್ರಕರಣ ಸೃಷ್ಟಿಸಿ ಸುಳ್ಳು ದೋಷಾರೋಪಣಾ ಪಟ್ಟಿ ದಾಖಲಿಸಿರುವುದು ಎಂದರೆ ಸರಿಯಲ್ಲ. ಪ್ರಕರಣಕ್ಕೂ ಮತ್ತು ಗುನ್ನೆಗೆ ಸಂಬಂಧಿಸಿದ ವಾಹನಕ್ಕೂ ಮತ್ತು ಆರೋಪಿತರಿಗೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ. ಅಂಕಿ–ಸಂಖ್ಯೆಗೋಸ್ಕರ ಸುಳ್ಳು ಪ್ರಕರಣ ಸೃಷ್ಟಿಸಿದ್ದೇನೆ ಎಂದರೆ ಸರಿಯಲ್ಲ ಎಂದು ಹೇಳಿರುತ್ತಾರೆ.

**ಅಂಶ ನಂ. (ಆ):**

ದಿನಾಂಕ: 21–09–2004 ರಂದು ರಾತ್ರಿ ಗಸ್ತು ನಿಯೋಜಿಸಿದ ಸಿಬ್ಬಂದಿಗಳು ಇಲಾಖಾ ವಾಹನ ಸಂಖ್ಯೆ: ಕೆಎ–30/ಜಿ–01ರ ಮೇಲೆ ಸುಮಾರು 12.00 ಘಂಟೆಯ ಸಮಯಕ್ಕೆ ಸುಂಕಸಾಳ ಸಿಬ್ಬಂದಿಗಳನ್ನು ಕೂಡಿಕೊಂಡು ಹೈಲ್ಯಾಂಡ್‌ವರೆಗೆ ಗಸ್ತು ತಿರುಗುತ್ತಾ ನಂತರ ತಿರುಗಿ ಹೊಸಕಂಬಿ, ಮಾಸ್ತಿಕಟ್ಟಾ, ಹೊನ್ನಳ್ಳಿ ಬ್ರಿಡ್ಜನ ವರೆಗೆ ತಿರುಗುತ್ತಾ ಎರಡನೇ ಸುತ್ತಿನಲ್ಲಿ ಸುಮಾರು ಬೆಳಗ್ಗಿನ ಜಾವ 4.00 ಗಂಟೆಯ ಸಮಯಕ್ಕೆ ಕೆಲವು ಸೂಕ್ಷ್ಮ ಪ್ರದೇಶಗಳಾದ ಬಡಿಗೋಣ ಪ್ಲಾಂಟೇಶನ್ ಹೆಬ್ಬುಳ ಮಾರ್ಗವಾಗಿ ಬೊಕ್ಸ ಕಟಿಂಗ್ ಪ್ಲಾಂಟೇಶನ್ ಪರಿಶೀಲಿಸುತ್ತಾ ಸುಂಕಸಾಳ ಬ್ರಿಡ್ಜಿನ ಮುಂದೆ ಹೋಗಿ ಎನ್.ಹೆಚ್–63ರ ಲಗ್ತ ಸಾಗ ಪ್ಲಾಂಟೇಶನ್‌ನಲ್ಲಿ ಒಂದು ಟಿಪ್ಪರ ವಾಹನ ನಿಂತಿರುವುದು ಕಂಡು ಬಂದು ಸಿಬ್ಬಂದಿಗಳು ಅನುಮಾನ ಬಂದು ಸದರಿ ವಾಹನವನ್ನು ಪರಿಶೀಲಿಸಲು ಹೋದಾಗ ಇಲಾಖಾ ವಾಹನವನ್ನು ಕಂಡು ಟಿಪ್ಪರ ವಾಹನದಲ್ಲಿದ್ದ ಆರೋಪಿಗಳು ಪರಾರಿಯಾಗಿರುತ್ತಾರೆ. ಸದರಿ ಟಿಪ್ಪರ ವಾಹನದ ಬಳಿ ಹೋಗಿ ಪರಿಶೀಲಿಸಿದಾಗ ಅದರ ನೋಂದಣಿ ಸಂಖ್ಯೆ: MEK–4048 ಇದ್ದು, ಸದರ ಗಾಡಿಯ ಮೇಲೆ ಸಾಗ ಜಾತಿ 21 ತುಂಡುಗಳು ಇದ್ದು ಸದರಿ ಸಾಗ ತುಂಡುಗಳ ಮೇಲೆ ಸರ್ಕಾರದ ಅಧಿಕೃತ ಮುದ್ರೆ ಯಾವುದೂ ಕಂಡು ಬಂದಿರುವುದಿಲ್ಲ. ಮತ್ತು ಸದರ ಟಿಪ್ಪರಿನ ಕ್ಯಾಬಿನ್ ಮೇಲೆ 4 ಅಡ್ಡಖರಗಸ, 1 ಪ್ಲಾಸ್ಟಿಕ್ ತಾಡಪತ್ರೆ ಹಾಗೂ

ಟಿಪ್ಪರಿನ ಕೆಳಗಡೆಗೆ ದಾಸ್ತಾನು ಇಟ್ಟ ಯಾವುದೇ ಛಪ್ಪಾ ವಗೈರೆ ಇಲ್ಲದ 7 ಸಾಗತುಂಡುಗಳು ಹಾಗೂ ಟಿಪ್ಪರಿನ ಒಳಗಡೆ ಪರಿಶೀಲಿಸಿದಾಗ ನಾಯಕ ಟ್ರಾನ್ಸ್‌ಪೋರ್ಟ ಡೆಲಿವರಿ ಕ್ಯಾರಿ ಚಲನ ರಸೀದಿ ಮತ್ತು ಟಿಪ್ಪರಿನ ಚಾಲಕನಾದ ಶಂಕರ ಬಿ. ಕಲ್ಲುಟ್ಟಕರ, ಸಾ: ಕಲ್ಲಭಾಗ, (ಬೊಬ್ರುವಾಡ) ಇವರ ಡ್ರೈವಿಂಗ್ ಲೈಸನ್ಸ್ ಪ್ರತಿ ಇದ್ದದ್ದು ಕಂಡು ಬಂದಿತ್ತು. ನಂತರ ಗಾಡಿಯ ಮೇಲೆ ಹೇರಿದ ಮತ್ತು ಕೆಳಗಡೆ ಇದ್ದ ಸಾಗ ತುಂಡುಗಳ ಅಳತೆಯನ್ನು ಮಾಡಲಾಗಿ ಅವು 28=2.264 ಘ.ಮೀ. ಇದ್ದವು. ಸದರ ತುಂಡುಗಳನ್ನು ಹಾಗೂ ಟಿಪ್ಪರನ್ನು ಪಂಚನಾಮೆಯಡಿ ಜಪ್ತಿಪಡಿಸಿ, ತುಂಡುಗಳಿಗೆ ಟಿ ಛಪ್ಪಾ ಹಾಕಿ ಕೆಂಪು ಪೇಂಟಿನಿಂದ ನಂಬರ ಹಾಕಿ ಇಲಾಖಾ ತಾಬಾ ತೆಗೆದುಕೊಳ್ಳಲಾಯಿತು. ಪಂಚನಾಮೆಯಿಂದ ಜಪ್ತಿಪಡಿಸಿಕೊಂಡ ತುಂಡುಗಳು, MEK–4048 ಟಿಪ್ಪರ ವಾಹನ, ಅಡ್ಡಖರಗಸ, ಪ್ಲಾಸ್ಟಿಕ್ ತಾಡಪತ್ರೆ, ಚಲನ ಪುಸ್ತಕ ಹಾಗೂ ಡ್ರೈವರ ಲೈಸನ್ಸ್ ಝೆರಾಕ್ಸ್ ಪ್ರತಿಗೆ ಕ್ರಮವಾಗಿ 1 ರಿಂದ 6 ಸಂಖ್ಯೆ ಎಂತಾ ನಮೂದಿಸಲಾಯಿತು. ಆದ್ದರಿಂದ ಜಪ್ತಿಪಡಿಸಿದ ವಾಹನ, ಸಾಗವಾನಿ ತುಂಡುಗಳು ಮತ್ತು ಇನ್ನಿತರ ವಸ್ತುಗಳನ್ನು ಅಕ್ರಮ ಸಾಗಾಣಿಕೆಗೆ ಬಳಸಿಕೊಂಡಿದ್ದನ್ನು ಖಾತ್ರಿಪಡಿಸಿ 71ಎ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಾಹನವನ್ನು ಜಪ್ತಿಪಡಿಸಲಾಯಿತು. ಸದರ ವಾಹನವು ಗುನ್ನೆಯಲ್ಲಿ ಬಳಸಿದ ಬಗ್ಗೆ ಅದನ್ನು (ನಿ.ಪಿ–1ರಿಂದ ನಿ.ಪಿ–6) ದಾಖಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲ್ಯು–1 ಪಿಡಬ್ಲ್ಯು–4** ಇವರು ನೀಡಿದ ಹೇಳಿಕೆಯು ಕೂಡ ಸದರ ಟಿಪ್ಪರ ವಾಹನ ಮತ್ತು ಸಾಗ ತುಂಡುಗಳನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ ಹಾಗೂ ಈ ಅಂಶವು ಪುರಾವೆ ಆಗಿರುತ್ತದೆ.

**ಅಂಶ ನಂ. (ಇ):**

ದಿನಾಂಕ: 23–09–2004 ರಂದು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 6/2004–05, ದಿನಾಂಕ: 22–09–2004 ಪಂಚಾನಾಮೆ, ಸೀಜರ್ ರಿಪೋರ್ಟ, ವಿಚಾರಣಾ ವರದಿ ಹಾಗೂ ವಾಹನದ ಛಾಯಾ ಚಿತ್ರ **(ನಿ.ಪಿ–1 ರಿಂದ ನಿ.ಪಿ–6)** ಪರಿಶೀಲಿಸಲಾಗಿದೆ. ಸದರಿ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಯನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು, ಉತ್ತರ ಕನ್ನಡ ಕಾರವಾರರವರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (1) crime page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವುದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಟಾಟಾ ಟಿಪ್ಪರ ವಾಹನ ಸಂಖ್ಯೆ: MEK–4048 ಇದು ದಿನಾಂಕ: 21–09–2004 ರಂದು ಪ್ರಥಮ ಮಾಹಿತಿ ಸಂಖ್ಯೆ: 6/2004–05, ದಿನಾಂಕ: 22–09–2004 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ ತುಂಡುಗಳು 28=2.264 ಘ.ಮೀ. ಮುದ್ದೇ ಮ್ಹಾಲು, 4 ಗರಗಸ ಮತ್ತು 1 ಟಿಪ್ಪರಿನ ಕ್ಯಾಬಿನ ಮೇಲೆ ಹೊದಿಸಿದ 1 ಪ್ಲೆಂಟಿಕ್ ತಾಡಪಾತ್ರೆಯನ್ನು ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವುದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ) ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ :

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಗಣಪತಿ ಕೆ, ಭಾ.ಆ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವುದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71(ಎ) ಈ ತಾರೀಖಿನವರೆಗೆ ಆದ ತಿದ್ದುಪಡಿ ಪ್ರಕಾರ ಟಾಟಾ ಟಿಪ್ಪರ ವಾಹನ ಸಂಖ್ಯೆ: MEK–4048 ಮತ್ತು ಅದರಲ್ಲಿದ್ದ ಸಾಗ ತುಂಡುಗಳು 28=2.264 ಘ.ಮೀ.ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

1) ನೋಂದಣಿ ಸಂಖ್ಯೆ : MEK: 4048

2) ಇಂಜಿನ್ ನಂಬರ : 692 D01228805

3) ಚಾಸಿ ನಂಬರ : HPT–1508

4) ವಾಹನದ ಮಾದರಿ : ಟಾಟಾ ಟಿಪ್ಪರ (ನಾಲ್ಕು ಗಾಲಿ)

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 30–07–2016 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**"CERTIFIED COPY"**

**PR No. 706**

**SC-1**

**ಗಣಪತಿ ಕೆ., ಭಾ.ಅ.ಸೇ,**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

## ಪೊಲೀಸ್ ಇಲಾಖೆ

### ಪೊಲೀಸ್ ಆಯುಕ್ತರು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ರವರ ನಡವಳಿಗಳು

**ಉಪಸ್ಥಿತರು: ಎನ್.ಎಸ್. ಮೇಘರಿಖ್, ಭಾ.ಪೊ.ಸೇ. ಪೊಲೀಸ್ ಆಯುಕ್ತರು, ಬೆಂಗಳೂರು ನಗರ**

**ವಿಷಯ :** ದಿನಾಂಕ: 08-09-2016 ರಂದು (ಗುರುವಾರ) ಶಿವಾಜಿನಗರ ಪೊಲೀಸ್ ಠಾಣಾವ್ಯಾಪ್ತಿಯಲ್ಲಿ ನಡೆಯುವ ಸೇಂಟ್ ಮೇರಿ ಮಾತೆಯ ವಾರ್ಷಿಕ ರಥೋತ್ಸವದ ಪ್ರಯುಕ್ತ ಶಾಂತಿ ಮತ್ತು ಸುವ್ಯವಸ್ಥೆ ಕಾಪಾಡುವ ಸಲುವಾಗಿ ಮದ್ಯ ಮಾರಾಟವನ್ನು ನಿಷೇಧಿಸುವ ಬಗ್ಗೆ.

**ಉಲ್ಲೇಖ :** ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ ರವರ ಪತ್ರ ಸಂಖ್ಯೆ: 35/ಬಿಬಿ/ಡಿಸಿಪಿ/ಪೊ/2016, ದಿನಾಂಕ:27-08-2016.

**ಪ್ರಸ್ತಾವನೆ :**

ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯ, ಪೂರ್ವ ವಿಭಾಗ, ಶಿವಾಜಿನಗರ ಪೊಲೀಸ್ ಠಾಣಾ ಸರಹದ್ದಿನ ಸೇಂಟ್ ಮೇರಿ ಆರೋಗ್ಯ ಮಾತೆಯ ವಾರ್ಷಿಕ ರಥೋತ್ಸವ ಕಾರ್ಯಕ್ರಮವು ದಿನಾಂಕ: 08-09-2016 ರಂದು ನಡೆಯುವುದು ಈ ಸಂದರ್ಭದಲ್ಲಿ ಸಾಮೂಹಿಕ ಪ್ರಾರ್ಥನೆ ಹಾಗೂ ಸೇವೆಗಳು ನಡೆಯುತ್ತವೆ. ಬೃಹತ್ ತೇರಿನ ಮೆರವಣಿಗೆ ಚರ್ಚ್‌ನಿಂದ ಹೊರಟು ಎಂ.ಕೆ. ಸ್ಟ್ರೀಟ್, ಶಿವಾಜಿ ರಸ್ತೆ, ಬ್ರಾಡ್‌ವೇ ರಸ್ತೆ, ರಸಲ್ ಮಾರ್ಕೆಟ್ ಮತ್ತು ನರೋನ ರಸ್ತೆ ಮಾರ್ಗವಾಗಿ ಸಂಚರಿಸುವ ಕಾರ್ಯಕ್ರಮವಿರುತ್ತದೆ ಈ ಉತ್ಸವದಲ್ಲಿ ನೆರೆಹೊರೆಯ ಪ್ರದೇಶಗಳಿಂದ ಸುಮಾರು 75000 ಭಕ್ತಾದಿಗಳು ಸೇರುವ ಸಾಧ್ಯತೆ ಇರುತ್ತದೆ. ಈ ಸಂದರ್ಭದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಶಾಂತಿಯನ್ನು ಕಾಪಾಡುವ ದೃಷ್ಟಿಯಿಂದಲೂ,

ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ ರವರು ಶಿವಾಜಿನಗರ, ಕಮರ್ಷಿಯಲ್ ಸ್ಟ್ರೀಟ್ ಮತ್ತು ಭಾರತೀನಗರ ಪೊಲೀಸ್ ಠಾಣಾ ವ್ಯಾಪ್ತಿಗಳಲ್ಲಿ ಮದ್ಯ ಮಾರಾಟವನ್ನು ನಿಷೇದಿಸುವಂತೆ ಕೋರಿರುವುದರಿಂದಲೂ,

ಈ ಸಮಯದಲ್ಲಿ ಕಿಡಿಗೇಡಿಗಳು, ಮದ್ಯಪಾನದ ಅಮಲಿನಲ್ಲಿ, ದುಷ್ಕೃತ್ಯವನ್ನು ನಡೆಸಿ, ಸಮಾಜದ ಶಾಂತಿ ಮತ್ತು ಸುವ್ಯವಸ್ಥೆಯನ್ನು ಹಾಳು ಮಾಡುವ ಸಂಭವಿರುವುದಾಗಿ ಗುಪ್ತವಾರ್ತಾ ವಿಭಾಗದ ಮಾಹಿತಿಯಿಂದ ತಿಳಿದುಬಂದಿರುವುದರಿಂದಲೂ,

ಇದಲ್ಲದೆ, ನಾನು ಸ್ವತಃ ಪರಿಶೀಲಿಸಲಾಗಿ ಮತ್ತು ಈ ಮೇಲ್ಕಂಡ ಮಾಹಿತಿಗಳ ಬಗ್ಗೆ ಖುದ್ದಾಗಿ ಮಾಡಿದ ವಿಚಾರಣೆಯಿಂದ ಸಾಕಷ್ಟು ಸತ್ಯಾಂಶವಿದೆಯೆಂದು ತಿಳಿದುಬಂದಿರುವುದರಿಂದಲೂ, ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯಲ್ಲಿ ಬರುವ ಪೂರ್ವ ವಿಭಾಗದ ಶಿವಾಜಿನಗರ ಪೊಲೀಸ್ ಠಾಣೆ, ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ ಮತ್ತು ಭಾರತೀನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ, ದಿನಾಂಕ: 08-09-2016 ರಂದು ನಡೆಯುವ ಉತ್ಸವದ ಸಮಯದಲ್ಲಿ ಕಿಡಿಗೇಡಿಗಳು ಮದ್ಯಪಾನವನ್ನು ಸೇವಿಸಿ ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿ, ಸಮಾಜದ ಶಾಂತಿ ಮತ್ತು ಸುವ್ಯವಸ್ಥೆಗೆ ಭಂಗವುಂಟು ಮಾಡುವ ಸಂಭವವಿರುವುದಾಗಿ ಹಾಗೂ ಈ ಮೆರವಣಿಗೆಯು ಸಂಚರಿಸುವ ಸ್ಥಳಗಳಲ್ಲಿ ಹಿಂದೂ, ಮುಸ್ಲಿಂ ಮತ್ತು ಕ್ರಿಶ್ಚಿಯನ್ ಸಮುದಾಯದ ಜನರ ನಿವಾಸಿಗಳು ಹಾಗೂ ವ್ಯಾಪಾರ ಮಳಿಗೆಗಳು ಇದ್ದು, ಈ ಮಾರ್ಗವು ಸೂಕ್ಷ್ಮ ಪ್ರದೇಶವಾಗಿರುವುದರಿಂದ ಯಾವುದೇ ಅಹಿತಕರ ಘಟನೆಗಳು ನಡೆಯದಂತೆ ಎಚ್ಚರ ವಹಿಸಲು, ಕಿಡಿಗೇಡಿಗಳಿಗೆ ಹಾಗೂ ಇತರೆ ಪ್ರಚೋದನಾಕಾರಿ ವ್ಯಕ್ತಿಗಳಿಗೆ ಮದ್ಯ ಸಿಗದಂತೆ ಮುಜಾಗ್ರತಾ ಕ್ರಮವಾಗಿ ಮದ್ಯದ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ನಿಷೇದಿಸುವಂತೆ ಈ ಕೆಳಕಂಡ ಆದೇಶ ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ ಗು.ವಾ/ಎಸ್.ಬಿ./ಮದ್ಯ ಮಾರಾಟ ನಿಷೇದಾಜ್ಞೆ/15/2016 ದಿನಾಂಕ: 30-08-2016**

ಈ ದೆಸೆಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಭಾರತೀಯ ದಂಡ ಪ್ರಕ್ರಿಯ ಸಂಹಿತೆಯ ಕಲಂ 144 ಉಪ ಕಲಂ (1) ಮತ್ತು (3)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಎನ್.ಎಸ್. ಮೇಘರಿಖ್, ಭಾ.ಪೊ.ಸೇ. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ದಿನಾಂಕ: 08-09-2016 ರಂದು ಬೆಳಿಗ್ಗೆ 06-00 ಗಂಟೆಯಿಂದ ಮಧ್ಯರಾತ್ರಿ 12.00 ಗಂಟೆಯವರೆಗೆ, ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯ, ಪೂರ್ವ ವಿಭಾಗದ ಶಿವಾಜಿನಗರ ಪೊಲೀಸ್ ಠಾಣೆ, ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ ಮತ್ತು ಭಾರತೀನಗರ ಪೊಲೀಸ್ ಠಾಣಾ ವ್ಯಾಪ್ತಿಗಳಲ್ಲಿ ಬರುವ ಎಲ್ಲಾ ರೀತಿಯಾ ಬಾರ್‌ಗಳು, ವೈನ್ಸ್ ಷಾಪಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ಮಾಡದಿರಲು ನಿಷೇದಾಜ್ಞೆಯನ್ನು ವಿಧಿಸಿರುತ್ತೇನೆ. ಈ ಕೆಳಗಿನವುಗಳನ್ನು ನಿಷೇದಾಜ್ಞೆಯಿಂದ ಹೊರತುಪಡಿಸಲಾಗಿದೆ.

- CL-4 ಕ್ಲಬ್‌ಗಳು
- CL-6A ಸ್ಟಾರ್ ಹೋಟೆಲ್‌ಗಳು.
- CL-8 ಮಿಲಿಟರಿ ಕ್ಯಾಂಟೀನ್‌ಗಳು

ಮೇಲ್ಕಂಡ ಆಜ್ಞೆಯನ್ನು ನನ್ನ ಸಹಿ ಮತ್ತು ನನ್ನ ಕಛೇರಿಯ ಮೊಹರಿನಲ್ಲಿ 2016ರ ಆಗಸ್ಟ್ ಮಾಹೆಯ ದಿನಾಂಕ: 30 ರಂದು ಹೊರಡಿಸಿರುತ್ತೇನೆ.

PR - 725

**ಎನ್.ಎಸ್. ಮೇಘರಿಖ್** ಐ.ಪಿ.ಎಸ್.
ಪೊಲೀಸ್ ಆಯುಕ್ತರು,
ಬೆಂಗಳೂರು ನಗರ

**Government of India**
**No. 112/1(KTK)/2016 CPI, dated: 03-08-2016**
**Ministry of Labour, Labour Bureau**
**Cleremont Shimla-171 004**
**Consumer Price Index Numbers for Industrial Workers**

**(Base - 2001=100) MONTH: JUNE 2016**

| Group/Sub-Group/Centre | BELAGAVI | BENGALURU | HUBBALLI DHARWAD | MERCARA | MYSURU |
|---|---|---|---|---|---|
| **FOOD** | | | | | |
| (a) Cereals & Products | 264 | 282 | 288 | 267 | 287 |
| (b) Pulses & Products | 456 | 477 | 498 | 421 | 454 |

| | | | | | |
|---|---|---|---|---|---|
| (c) Oils & Fats | 256 | 294 | 219 | 279 | 243 |
| (d) Meat, Fish & Eggs | 418 | 369 | 386 | 346 | 364 |
| (e) Milk & Products | 321 | 308 | 268 | 301 | 313 |
| (f) Condiments & Spices | 292 | 343 | 342 | 305 | 367 |
| (g) Vegetables & Fruits | 489 | 428 | 434 | 402 | 451 |
| (h) Other Food | 314 | 318 | 291 | 304 | 305 |
| **FOOD GROUP** | **327** | **337** | **318** | **316** | **336** |
| Pan, Supari, Tobacco & Intoxicants | 333 | 327 | 321 | 259 | 363 |
| Fuel & Light | 222 | 204 | 218 | 435 | 206 |
| Housing Index | 277 | 246 | 387 | 102 | 302 |
| Clothing, Bedding & Footwear | 169 | 169 | 181 | 222 | 201 |
| **Miscellaneous** | | | | | |
| (a) Medical Care | 247 | 272 | 224 | 267 | 214 |
| (b) Education, Recreation & Amusement | 184 | 203 | 196 | 391 | 149 |
| (c) Transport & Communication | 301 | 342 | 320 | 299 | 266 |
| (d) Personal Care & Effects | 246 | 266 | 245 | 253 | 231 |
| (e) Others | 240 | 221 | 242 | 214 | 324 |
| Miscellaneous Group | 245 | 271 | 246 | 284 | 224 |
| **GENERAL INDEX** | **287** | **286** | **298** | **290** | **289** |

**KAMLA GULERIA**
Economic Officer
**JOINT DIRECTOR,**
Directorate of Economics & Statistics,
Government of Karnataka, Bengaluru.

## DIRECTORATE OF ECONOMICS AND STATISTICS, BENGALURU-1

**Consumer Price Index Numbers for Industrial Workers**

**No. DES/ SIP/PWX/23/2016, 29-07-2016**

**State : Karnataka** **Month-Year: June 2016**

**Base : 1987-88=100**

| Group/Sub-Group | Ballari | Bhadravathi | Davanagere | Dandeli | Kalaburagi | Harihara | Hassan | Mandya | Mangaluru | Raichur | Tumakuru |
|---|---|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** | **11** | **12** |
| **FOOD** | | | | | | | | | | | |
| Cereals & Cereals Products | 997 | 1013 | 1082 | 861 | 1009 | 953 | 1046 | 1111 | 841 | 1069 | 1023 |
| Pulses & Pulses Products | 1254 | 1371 | 1325 | 1410 | 1266 | 1296 | 1337 | 1232 | 1283 | 1349 | 1321 |
| Oils & Fats | 459 | 405 | 481 | 414 | 463 | 472 | 404 | 499 | 462 | 420 | 437 |
| Meat, Fish & Eggs | 1076 | 1129 | 1198 | 1087 | 1267 | 1119 | 1005 | 1114 | 1084 | 1218 | 1118 |
| Milk & Milk Products | 843 | 786 | 892 | 897 | 777 | 886 | 804 | 868 | 771 | 851 | 820 |
| Condiments & Spices | 724 | 863 | 1196 | 1031 | 788 | 886 | 952 | 895 | 714 | 937 | 891 |
| Vegetables & Fruits | 1163 | 1340 | 1424 | 1200 | 933 | 1165 | 1250 | 1320 | 1107 | 891 | 1659 |
| Other Food | 676 | 1006 | 898 | 959 | 798 | 673 | 727 | 730 | 833 | 695 | 771 |

